ಬಾಣಭಟ್ಟ ಮಹಾಕವಿಯ 

# ಕಾದಂಬರಿ

( ಗದ್ಯಕಾವ್ಯ )

卐

ಲೇಖಕರು:

ಪಂಡಿತ ಜೆ. ಎ. ಕವಲಿ



ಪ್ರಕಾಶಕರು:

ರಾಮಾಶ್ರಯ ಬುಕ್ ಡಿಪೋ

ಸುಭಾಸ ರೋಡ — ಧಾರವಾಡ



ಸಂಸ್ಕೃತ ಸಾಹಿತ್ಯ ಸುಧಾ

- ಶ್ರೀ -

ಬಾಣಭಟ್ಟ ಮಹಾಕವಿಯ

# ಕಾದಂಬರಿ

( ಗದ್ಯಕಾವ್ಯ )

卐


ಲೇಖಕರು:

ಪಂಡಿತ ಜೆ. ಎ. ಕವಲಿ





ಪ್ರಕಾಶಕರು:

ರಾಮಾಶ್ರಯ ಬುಕ್ ಡಿಪೋ,

ಸುಭಾಸ ರೋಡ — ಧಾರವಾಡ

ಮುದ್ರಕರು :
**ಎಲ್. ಆಯ್. ಆಕಳವಾಡಿ**
ಬಿ. ಎ., ಬಿ. ಕಾಮ್
ಮನೋಹರ ಮುದ್ರಣಾಲಯ,
ಮಂಗಳವಾರಪೇಟ : ಧಾರವಾಡ

ಬೆಲೆ ರೂ : 0.45



ಪ್ರಕಾಶಕರು:
**ಆಯ್. ಆರ್. ಆಕಳವಾಡಿ ಆ್ಯಂಡ ಸನ್ಸ**
**ರಾಮಾಶ್ರಯ ಬುಕ್ ಡಿಪೊ,**
**ಸುಭಾಸರೋಡ : ಧಾರವಾಡ**

# ಒಡೆಪು

ಸಂಸ್ಕೃತ ಭಾಷೆ ಪ್ರಪಂಚದ ಎಲ್ಲ ಭಾಷೆಗಳಲ್ಲಿಯೂ ಅಗ್ರಪಟ್ಟವನ್ನು ಪಡೆದಿದೆ. ಈ ಮಾತಿಗೆ ಬೆಂಬಲವಾಗಿ ಅನೇಕ ಕಾರಣಗಳಿವೆ: ಸಂಸ್ಕೃತ ಭಾಷೆ– ೧. ಅತ್ಯಂತ ಪ್ರಾಚೀನತಮವಾಗಿದೆ; ೨. ದ್ರಾವಿಡ ಮತ್ತು ಕೆಲವು ಗಿರಿಜನ ಭಾಷೆಗಳನ್ನು ಉಳಿದು ದೇಶ–ವಿದೇಶಗಳ ಮುಕ್ಕಾಲುವಾಸಿ ಭಾಷೆಗಳಿಗೆ ಮಾತೃ ಸ್ಥಾನದಲ್ಲಿದೆ; ೩. ದ್ರಾವಿಡ ಭಾಷಾ ಸಂತತಿಗೆ ಕೂಡ 'ಸಾಕುತಾಯಿ' ಯಾಗಿ ನಿಂತಿದೆ; ಆ ಸಂತತಿಯ ಸಂವರ್ಧನೆಗಾಗಿ ತನ್ನ ಅತುಲ ಸಂಪತ್ತನ್ನು ನೀಡಿದೆ. ೪. ಮಾನವ ಜೀವಿತದ ಹಿರಿಯ ಗುರಿ ಎನಿಸುವ ಮತ್ತು ಇಹ–ಪರ ಸೌಖ್ಯಗಳನ್ನು ಏಕೀಕರಿಸುವ ಅಧ್ಯಾತ್ಮವಾದದ ವೇದಾದಿ ವಾಙ್ಮಯಗಳಿಗೆ ಆರು ಸಾವಿರ ವರುಷಗಳ ಕೆಳಗೇ ಜನ್ಮ ಕೊಟ್ಟಿದೆ. ೫. ಜಾಗತಿಕ ಮಹಾಕವಿಗಳೆನಿಸಿದ ಭಾಸ, ಕಾಳಿದಾಸ, ಭವಭೂತಿ, ದಂಡಿ ಮುಂತಾದವರನ್ನು ಸಾಹಿತ್ಯ ಸಾಮ್ರಾಜ್ಯ ಸಿಂಹಾಸನದ ಮೇಲೆ ಕುಳ್ಳಿರಿಸಿದೆ. ೬. ಮೇಣದಂತೆ ಮಿದುವಾಗಿದ್ದು, ಅರ್ಥ ಗಾಂಭೀರ್ಯ ಶಬ್ದ ಸೌಷ್ಠವಗಳ ಬಲದಿಂದ ಯಾವುದೇ ವಿಚಾರವನ್ನು ಸಮರ್ಥಿಸಬಲ್ಲ ಶಕ್ತಿಯನ್ನು ಒಳಗೊಂಡಿದೆ. ೬. ಅಧ್ಯಾತ್ಮಿಕ ವಾಙ್ಮಯದಂತೆ, ವೈದ್ಯ, ಶಿಲ್ಪ, ವಿಜ್ಞಾನ, ಜ್ಯೋತಿಷ, ಗಣಿತ ಮುಂತಾದ ಭೌತಿಕ ಶಾಸ್ತ್ರಗಳ ಮಹಾ ಗ್ರಂಥಗಳನ್ನೂ ಒದಗಿಸಿದೆ. ೭. ಕಲಾವಿಲಾಸದ ಅಂಗಗಳಾದ ನೃತ್ಯ, ಸಂಗೀತ, ಚಿತ್ರಕಲೆ, ನಾಟಕ ಮೊದಲಾದ ಲಲಿತ–ಸಾಹಿತ್ಯಗಳಿಂದ ಓತಪ್ರೋತವಾಗಿ ತುಂಬಿಕೊಂಡಿದೆ. ೮. ರಸಾಲಂಕಾರ ಪರಿಪೋಷಣೆಗಂತೂ ಏಕಮೇವಾದ್ವಿತೀಯವಾಗಿ ಮೆರೆಯುತ್ತಿದೆ. ೯. ಸಂಸ್ಕೃತಿ ನಾಗರಿಕತೆಗಳ ಸುಂದರ ಸಮನ್ವಯವಾಗಿದೆ. ೧೦. ವಿಶ್ವದ ವಿವಿಧ ಭಾಷೆಗಳ ಅಭ್ಯಾಸಕ್ಕೆ ಮಿಗಿಲಾದ ಮಾಧ್ಯಮವೆನಿಸಿದೆ ...............

ಸಂಸ್ಕೃತ ಭಾಷೆಯ ಶ್ರೇಷ್ಠತೆಯ ಬಗೆಗೆ ಇನ್ನೂ ಕೆಲವು ಕಾರಣಗಳನ್ನು ಕೊಡಬಹುದು. ಎಂತೆಯೇ ಇದನ್ನು ದೇವವಾಣಿ, ಆರ್ಷವಾಣಿ, ಗೀರ್ವಾಣವಾಣಿ ಮುಂತಾಗಿ ಪವಿತ್ರ ನಾಮಗಳಿಂದ ಗೌರವಿಸಲಾಗಿದೆ. ಇಂತಹ ಚಿರನೂತನ ಭಾಷೆಯನ್ನು 'ಮೃತ ಭಾಷೆ' ( Dead language ) ಎಂದು ಕರೆಯುವುದು, ಗುಣವನ್ನು ಅಗೌರವಿಸಿದಂತೆ; ಅದಕ್ಕಿಂತಲೂ ಅಧಿಕವಾಗಿ ನಮ್ಮ ಮೂರ್ಖತನದ ಮೆರವಣಿಗೆಯನ್ನು ಮಾಡಿಕೊಂಡಂತೆ! ಸಂಸ್ಕೃತ ಭಾಷೆಯ ಮಹತ್ತ್ವ ಕಡಮೆಯಾದಂತೆ, ಭಾರತೀಯ ನಾಗರಿಕತೆ, ಸುಸಂಸ್ಕೃತಿಗಳ ಮಟ್ಟವೂ ಕೆಳಗೆ ಇಳಿಯುಹತ್ತಿದೆ ಎಂಬುದು ವಿಚಾರವಂತರಿಗೆ ಹೊಳೆಯದಿರದು.

ಹೀಗೆ ಹೇಳಿದ ಮಾತ್ರಕ್ಕೆ, ಅನ್ಯಭಾಷೆಗಳು ಅಸಂಸ್ಕೃತ, ಅಪರಿಪೂರ್ಣ ಎಂದು ಹೇಳುವ ಉದ್ದೇಶ ನಮ್ಮದಲ್ಲ. ದ್ರಾವಿಡ ಭಾಷೆಯಲ್ಲಿ ಅಧ್ಯಾತ್ಮಿಕ – ಭೌತಿಕ ಮಹಾ ಶಾಸ್ತ್ರಗಳಿಲ್ಲವೆ ? ಲಲಿತ ಸಾಹಿತ್ಯ ಸಮೃದ್ಧಿಯಿಲ್ಲವೇ ? ಎಂದು ಕೇಳುವವರೂ ಉಂಟು. ಅವರ ಆಕಾಂಕ್ಷೆಗೆ ಆನಂದದಿಂದ ಸಮ್ಮತಿಯನ್ನು ಸೂಚಿಸುತ್ತೇವೆ. ಆದರೆ, ಅದೇ ಪ್ರಸಂಗದಲ್ಲಿ, ಅನ್ಯಭಾಷಾ ಸಂಪ್ರದಾಯದ ಮಹಾನುಭಾವರು ಮೊತ್ತಮೊದಲಿಗೆ ಸಂಸ್ಕೃತ ಸಾಹಿತ್ಯಗಳನ್ನು ಆಳವಾಗಿ ಅಭ್ಯಸಿಸಿದ್ದರೆಂಬುದನ್ನೂ ಅದರ ಬಲ

ದಿಂದಲೇ ವಾಙ್ಮಯ ಸಾಹಿತ್ಯ – ಸೃಷ್ಟಿಗಳ ಸ್ಫೂರ್ತಿಯನ್ನು ಪಡೆದರೆಂಬುದನ್ನೂ ಹೇಳ ಬಯಸುತ್ತೇವೆ. ಮುಂದೆ ಕಾಲಮಾನಕ್ಕೆ ತಕ್ಕಂತೆ ಹೊಸ ಹೊಸ ವಿಚಾರ – ವಿಧಾನ ಗಳನ್ನು ತಮ್ಮ ಕೃತಿಗಳಲ್ಲಿ ಸೇರಿಸಿರಬಹುದು. ಬದಲಾಗುತ್ತಿರುವ ಜಗತ್ತಿನಲ್ಲಿ ಇದು ಸಹಜ ಸತ್ಯವೇ ಎನ್ನೋಣ. ಎಂದ ಮಾತ್ರಕ್ಕೆ, ಆರಂಭದಲ್ಲಿ ಅವರು ಪಡೆದ ಸಂಸ್ಕೃತ ಭಾಷಾ ಪರಿಣತಿಯ ಋಣವನ್ನು ಮರೆಯುವಂತಿಲ್ಲ.

ಇಂತಹ ಅಮೌಲ್ಯ ಸಂಸ್ಕೃತ ಭಾಷೆ ಇಂದು– ದೇಶವಿದೇಶಗಳ ಮಾತು ಹಾಗಿರಲಿ– ಭಾರತದಲ್ಲಿಯೇ ಅನವಸ್ಥೆ ದುರವಸ್ಥೆಗಳಿಗೆ ಈಡಾಗಿದೆ. ಇದರಿಂದ ಭಾರತೀಯ ಜನಜೀವನದ ಪ್ರಗತಿಗೆ ಬಹುಮುಖವಾದ ಬರಡುತನ ಬಂದಿದೆ ಎಂದು ಆಧುನಿಕ ಜನನಾಯಕರು ಕಂಡು ಕೊಂಡಿದ್ದಾರೆ. ಆದಕ್ಕಾಗಿಯೇ, ಸಂಸ್ಕೃತ ಭಾಷೆಯ ಪುನರುಜ್ಜೀವನ ಪುನಾರಚನೆಗಳ ಸಲುವಾಗಿ ದೇಶದಾದ್ಯಂತ ಬಗೆಬಗೆಯ ಚಟುವಟಿಕೆಗಳನ್ನು ಆರಂಭಿಸಿದ್ದಾರೆ. ಅವರ ಮಹಾಸೇತು ಬಂಧನ ಕಾರ್ಯದಲ್ಲಿ ನಮ್ಮ 'ಸಂಸ್ಕೃತ ಸಾಹಿತ್ಯ ಸುಧಾ' ಪುಸ್ತಕಮಾಲೆ 'ಅಳಿಲುಸೇವೆ'.

ಮೂರು ವರುಷಗಳ ಬುದ್ಧಿ ನೂರು ವರುಷಗಳ ವರೆಗೆ— ಎಂದು ಕನ್ನಡದಲ್ಲಿ ನಾಣ್ನುಡಿ. ಎಳೆಯ ಗಿಡದ ಮೇಲೆ ಕೆತ್ತಿದ ಅಕ್ಷರಗಳು, ಗಿಡದ ಬಳಮೆಯೊಡನೆ ಬೆಳೆಯುತ್ತಲೇ ಹೋಗುತ್ತಿವೆ, ಎಂಬುದು ಅನುಭವ ವೇದ್ಯ. ಈ ಕಾರಣದಿಂದ ಪ್ರಾಥಮಿಕ ಶಾಲೆಯ ಮಕ್ಕಳಿಂದ ಹಿಡಿದು ಅಕ್ಕರಿಗರಾದ ಮುಪ್ಪಿನವರ ವರೆಗೂ ಓದಲು ಅನುಕೂಲವಾಗುವಂತೆ, ತಿಳಿಗನ್ನಡ ನುಡಿ ಬಟ್ಟಲಿನಲ್ಲಿ ಸಂಸ್ಕೃತ ಸಾಹಿತ್ಯದ ಮಹಾ ಮಹಾ ಕವಿಗಳ ಸಾಹಿತ್ಯ ಸುಧೆಯ ಸಾರವನ್ನು ಕನ್ನಡ ಕಥಾರೂಪದಲ್ಲಿ ಸುರಿಯಲಾಗಿದೆ. ಇದರ ಸ್ವಾದ – ಸೌಂದರ್ಯಗಳಿಂದ ಸರ್ವರೂ ಸಂತೋಷ ಪಡಬೇಕೆಂಬುದೇ ನಮ್ಮ ಹೆಬ್ಬಯಕೆ.

ಬಾಣಭಟ್ಟ ಮಹಾಕವಿಯ ಶೃಂಗಾರರಸಘಟ್ಟಿಯಾಗಿದೆ ಕಾದಂಬರೀ ಕಥೆ. ಸಂಸ್ಕೃತ ಗದ್ಯ ಕಾವ್ಯಗಳಲ್ಲಿ ಈ ಕೃತಿಯಷ್ಟು ಜನಪ್ರಿಯವಾದ ಸಾಹಿತ್ಯ ಬೇರೊಂದಿಲ್ಲವೆಂದು ಹೇಳಿದರೆ ತಪ್ಪೇನಿಲ್ಲ. ಬಾಣೋಚ್ಛಿಷ್ಟಂ ಜಗತ್ಸರ್ವಂ— ಎಂಬ ವಾಕ್ಯ ಈ ಮಹಾಕವಿಯ ದಿವ್ಯ ನಿದರ್ಶನವಾಗಿದೆ.

ಕಾದಂಬರಿ ಕಥಾ ನಾಯಿಕೆಯಾದರೂ ಮಹಾಶ್ವೇತೆಯ ಪಾತ್ರದ ತೂಕ ಅದಕ್ಕಿಲ್ಲ. ಮಹಾಶ್ವೇತೆ ನಿಷ್ಠಾವಂತ ತಪಸ್ವಿನಿ. ಈ ಪಾತ್ರದ ಮೂಲಕ ಕಾಮ ಮತ್ತು ಪ್ರೇಮ ಇವುಗಳಲ್ಲಿಯ ಮಹದಂತರವನ್ನು ನಿಚ್ಚಳವಾಗಿ ಕಂಡುಕೊಳ್ಳಬಹುದಾಗಿದೆ.

ಕಥಾ ನಾಯಕರ ಮೂರು ಜನ್ಮಗಳ ವೃತ್ತಾಂತ ಬಲು ತೊಡಕಿನದಾಗಿದೆ ಆದರೂ ಅದು ಸರಳವಾಗಿ ತಿಳಿಯುವಂತೆ ಕವಿ ಕಾವ್ಯರಚನಾ ಕೌಶಲವನ್ನು ತೋರಿಸಿದ್ದಾನೆ. ಅಲ್ಲಲ್ಲಿ ಬರುವ ಅಚ್ಛೋದ ಸರೋವರ, ಕೈಲಾಸಗಿರಿ, ಹೇಮಕೂಟಗಳ ಬಣ್ಣನೆಗಳು, ' ಬಣ್ಣಿಸುವ ಬಣತಿ ಬಾಣನಿಗೇ ಮೀಸಲು ' ಎಂದು ಸಾರಿ ಹೇಳುತ್ತಿವೆ. ಯುವರಾಜ ಚಂದ್ರಾಪೀಡನಿಗೆ ಶುಕನಾಸ ಮಂತ್ರಿ ಮಾಡಿದ ಉಪದೇಶ ಜಗತ್ತಿನ

ರಾಜಕೀಯಕ್ಕೆ ಕಳಸದಂತಿದೆ. ಈ ಮಹಾಕವಿಯ ಭಾಷಾ ಭಾಂಡಾರ, ಪ್ರತಿಭೆ, ಕಲ್ಪಕತೆಗಳನ್ನು— ಸಾಧ್ಯವಾದರೆ— ಎರಡು ಸಾವಿರ ನಾಲಗೆಯುಳ್ಳ ಆದಿಶೇಷನೇ ಹೊಗಳಬೇಕು. ಮೇರು ಸರ್ಷಪನ್ಯಾಯದಂತೆ, ಈ ಕಿರಿಹೊತ್ತಗೆಯಲ್ಲಿ ಮೂಲದ ಸೊಬಗು-ಸವಿಗಳನ್ನು ತರಲು ಯತ್ನಿಸಿದೆ, ಅಷ್ಟೇ.

ಕವಿಯ ಮೂಲಕೃತಿಗೆ ಅನ್ಯಾಯ-ಅಪಚಾರಗಳಾಗದಂತೆ, ಅದರಲ್ಲಿ ನಮ್ಮದೇನನ್ನೂ ಬೆರೆಸದಂತೆ, ಸಾರದ ಪಾಕವನ್ನು ಕನ್ನಡದಲ್ಲಿ ಇಳಿಸಿದೆ. ಕುಂದು-ಕೊರತೆಗಳನ್ನು ರಸಜ್ಞರು ಸಹೃದಯತೆಯಿಂದ ಸೂಚಿಸಿದರೆ, ಕೃತಜ್ಞತೆಯಿಂದ ಸ್ವೀಕರಿಸಿ ಮುಂದಿನ ಮುದ್ರಣದಲ್ಲಿ ಸರಿಪಡಿಸುತ್ತೇವೆ.

ಸಾಧನಕೆರೆ, ಧಾರವಾಡ
೧೫ – ೮ – ೧೯೬೧

—ಪಂ. ಕವಲಿ

ಮಹಾಕವಿ ಬಾಣಭಟ್ಟನ

# ಕಾದಂಬರಿ

卐

## ೧. ಶೂದ್ರಕರಾಜನ ಸಭೆಯಲ್ಲಿ ಶುಕರತ್ನ

ಮಾಳವ ದೇಶದ ವೇತ್ರವತೀ ನದೀತಟದ ಮೇಲೆ ವಿದಿಶಾ ನಗರವಿತ್ತು. ಅದನ್ನು ಶೂದ್ರಕ ಅರಸು ಆಳುತ್ತಿದ್ದ. ಆತನನ್ನು ಎರಡನೆಯ ಇಂದ್ರ ಎಂದು ಹೇಳಬಹುದು. ನಾಲ್ಕು ಕಡಲು ತಡಿಯ ಒಡ್ಯಾಣವನ್ನು ಧರಿಸಿದ ಪೃಥ್ವೀಪತಿ ಅವನು. ಭೂಮಂಡಲದ ಎಲ್ಲ ದೊರೆಗಳೂ ಅವನ ಅಂಕಿತದಲ್ಲಿ ಇದ್ದರು.

ಶೂದ್ರಕ ದೊರೆಯಲ್ಲಿ ಚಕ್ರವರ್ತಿಯ ಎಲ್ಲ ಲಕ್ಷಣಗಳೂ ಎದ್ದು ಕಾಣುತ್ತಿದ್ದುವು. ಅವನ ಕೈಯಲ್ಲಿ ವಿಷ್ಣುವಿನಂತೆ ಶಂಖ – ಚಕ್ರಗಳ ಚಿಹ್ನೆಗಳಿದ್ದುವು. ಆತನು ನಡೆ-ನುಡಿಗಳಲ್ಲಿ ಕಾಮನನ್ನು ಗೆದ್ದ ಶಿವನಂತಿದ್ದ. ಅವನ ಶಕ್ತಿಯಲ್ಲಿ ಷಣ್ಮುಖಸ್ವಾಮಿಯ ಸತ್ತ್ವವಿತ್ತು. ಬ್ರಹ್ಮದೇವನ ರಾಜಹಂಸದಂತೆ, ರಾಜಮಂಡಲವನ್ನು ತನ್ನ ವಾಹನವನ್ನಾಗಿ ಮಾಡಿಕೊಂಡಿದ್ದ. ಸಮುದ್ರರಾಜನಂತೆ ಲಕ್ಷ್ಮಿಯ ಹುಟ್ಟಿನ ನೆಲೆಯಾಗಿದ್ದ. ಸೂರ್ಯನಂತೆ ನಿತ್ಯವೂ ಅವನ ಅಭ್ಯುದಯವಾಗುತ್ತಿತ್ತು. ದಿಗ್ಗಜಗಳಂತೆ ಆತನ ಹಸ್ತ ಸದಾ ದಾನಧಾರೆಯಿಂದ ಹಸಿಯಾಗಿರುತ್ತಿತ್ತು. ಆತನು ಸಕಲ ಶಾಸ್ತ್ರಗಳಲ್ಲಿಯೂ ಪಂಡಿತ; ಲಲಿತ ಕಲೆಗಳ ನೆಲೆ. ಮಿತ್ರರಿಗೆ ಉದಯಾಚಲನಾಗಿದ್ದರೆ, ಶತ್ರುಗಳಿಗೆ ಧೂಮಕೇತುವಾಗಿದ್ದ.

ಆತನ ಪ್ರಜೆಗಳಲ್ಲಿ ವರ್ಣಸಂಕರ, ಅಪರಾಧ, ದಂಡ, ಭಯ, ವಿಲಾಸ, ಮದ, ದುರ್ಗುಣ, ಮೋಸ, ಸುಳ್ಳುಗಳು ಇರಲೇ ಇಲ್ಲ.

ಒಟ್ಟಾರೆ, ಶೂದ್ರಕರಾಜನ ವಿದಿಶಾರಾಜಧಾನಿಯಲ್ಲಿ ಸತ್ಯಯುಗ-ಶಾಶ್ವತ ವಾಸಮಾಡಿತ್ತು.

ಭುಜಬಲಶಾಲಿಯಾದ ದೊರೆಗೆ ಬದ್ಧಿಬಲಶಾಲಿಯಾದ ಮಂತ್ರಿ ದೊರೆತಿದ್ದ. ಅರಸು ಸಮಾನ ವಯಸ್ಸಿನ ರಾಜಕುಮಾರರೊಡನೆ ಬಗೆಬಗೆಯ ವಿನೋದಗಳಲ್ಲಿ ತನ್ನ ತಾರುಣ್ಯವನ್ನು ಕಳೆಯುತ್ತಿದ್ದ. ಆ ರಾಜಕುಮಾರರು ಕೂಡ ಆತನಂತೆಯೇ ಸಂಗೀತ, ಚಿತ್ರಕಲೆ, ಕಾವ್ಯರಚನೆ, ಇತಿಹಾಸ ವಿದ್ಯೆಗಳಲ್ಲಿ ನಿಪುಣರು; ಬೇಟೆಯಾಡುವುದರಲ್ಲಿ ಬಲ್ಲಿದರು; ಅತಿಥಿ ಸೇವೆಯಲ್ಲಿ ಅದ್ವಿತೀಯರು. ಇಂತಹರ ಒಡನಾಟವೆಲ್ಲ ರಸನಿಮಿಷವೇ ಆಗಿರುತ್ತಿತ್ತು.

ಒಂದು ಮಂಗಲಮಯ ಮುಂಜಾವದಲ್ಲಿ ಅರಸು ರತ್ನಖಚಿತ ಸಿಂಹಾಸನದ ಮೇಲೆ ಕುಳಿತಿದ್ದ. ಆಗ, ಪ್ರತೀಹಾರಿ ರಾಜ ಸಭೆಯ ಒಳಗೆ ಬಂದಳು. ಕೈಯಲ್ಲಿ ಕತ್ತಿಯನ್ನು ಹಿಡಿದು ಬಳುಕುತ್ತ ಬರುವ ಆಕೆ, ಸರ್ಪ ಸುತ್ತಿದ ಬಳ್ಳಿಯಂತೆ ಬೆಡಗುಗೊಂಡಿದ್ದಳು. ಅವಳು ಮಂಡೆಯೂರಿ ನೆಲಮುಟ್ಟಿ ನಮಸ್ಕರಿಸಿ ಬಿನ್ನವಿಸಿದಳು—

ದೇವಾ, ದಕ್ಷಿಣ ದಿಕ್ಕಿನಿಂದ ಚಾಂಡಾಲಕನ್ಯೆ ಒಬ್ಬಳು ಬಂದಿದ್ದಾಳೆ; ದ್ವಾರದಲ್ಲಿ ನಿಂತಿದ್ದಾಳೆ. ಅವಳ ಕೈಯಲ್ಲಿ ಚೆಲುವಾದ ಗಿಳಿಯ ಪಂಜರವಿದೆ. ಮತ್ತು 'ಮಹಾರಾಜರಲ್ಲಿ ಸಮುದ್ರದಂತೆ ಸರ್ವ ರತ್ನಗಳಿವೆ. ಈ ಗಿಳಿಯೂ ಒಂದು ಅಮೌಲ್ಯ ರತ್ನ ಇದಕ್ಕೆ ಪ್ರಭುಗಳೇ ತಕ್ಕ ಆಶ್ರಯ ಸ್ಥಾನ ಅವರ ದಿವ್ಯ ಚರಣಗಳಿಗೆ ಈ ಅಮೌಲ್ಯವಾದ ಕಾಣಿಕೆಯನ್ನು ಅರ್ಪಿಸಬೇಕಾಗಿದೆ' ಎಂದು ಬಿನ್ನವಿಸುತ್ತಾಳೆ....

ಅರಸು ಒಪ್ಪಿಗೆ ಕೊಟ್ಟ. ಪ್ರತೀಹಾರಿ ಚಾಂಡಾಲ ಕನ್ನಿಕೆಯನ್ನು ಒಳಗೆ ಕರೆತಂದಳು. ಆಕೆ ಕೆಂದಾವರೆಯಂತೆ ಕೋಮಲವಾದ ಕರದಲ್ಲಿ ಹಿಡಿದ ಬೆತ್ತದಿಂದ ಮಣಿಕುಟ್ಟಿದ ಮೇಲೆ ಸಪ್ಪಳು ಮಾಡಿದಳು. ನೆರೆದ ರಾಜಸಭೆಯೆಲ್ಲ ಒಮ್ಮೆಲೆ ಅವಳ ಕಡೆಗೆ ನೆಟ್ಟ ನೋಟದಿಂದ ನೋಡತೊಡಗಿತು. ಅರಸು ಕೂಡ ಆ ಹೊಸಹರೆಯದ ಸೌಂದರ್ಯವನ್ನು ಎವೆಯಿಕ್ಕದೆ ನೋಡತೊಡಗಿದ. ಅವಳೊಡನೆ

ಬಿಳಿಗೂದಲಿನ ಸೌಮ್ಯ ಮುಖಮುದ್ರೆಯ ಮುದುಕ ಬಂದಿದ್ದ. ಅಂತಹ ಇಳಿವಯಸ್ಸಿನಲ್ಲಿಯೂ ಅವನ ಕಾಯದ ಕೆಚ್ಚು ಕಡಮೆ ಯಾಗಿರಲಿಲ್ಲ; ಅವನ ಹಿಂದೆ ಎಳಹರಯದ ಹುಡುಗ ನಿಂತಿದ್ದ. ಅವನ ಜುಲುಪಿಗಳು ಕೆದರಿದ್ದುವು. ಅವನ ಕೈಯಲ್ಲಿ ಚಿನ್ನದ ಸಲಿಕೆ ಗಳಿಂದ ಮಾಡಿದ ಸುಂದರವಾದ ಪಂಜರವಿತ್ತು. ಅದರಲ್ಲಿ ಹೊಳೆ ಹೊಳೆವ ಮೈಯ ಗಿಳಿ ಕುಳಿತಿತ್ತು.

ಚಾಂಡಾಲಕನ್ಯೆ ನಡೆದಾಡುವ ನೀಲರತ್ನದ ಬೊಂಬೆಯಂತೆ ಕಾಣುತ್ತಿದ್ದಳು; ಶ್ಯಾಮವರ್ಣದ ಮಾಯಾಮೋಹಿನಿಯೇ, ಎನುವಂತಿ ದ್ದಳು. ಅವಳು ನೀಲವರ್ಣದ ನಿಲುವಂಗಿಯಿಂದ ಅಡಿಯ ವರೆಗೂ ಮುಚ್ಚಿಕೊಂಡಿದ್ದಳು; ಮೇಲೆ ಚೆಂದವಾದ ವಸ್ತ್ರವನ್ನು ಹೊದೆ ದಿದ್ದಳು. ಚಂದ್ರ ಕಿರಣಗಳಿಂದ ಚಕಚಕಿಸುವ ರಾತ್ರಿಯಂತೆ, ಕಿವಿ ಯೊಳಗಿನ ಕುಸುಮಗಳಿಂದ ಗಲ್ಲಗಳು ಬಿಳುಪಾಗಿ ಬೆಡಗುಗೊಂಡಿ ದ್ದುವು. ಹಣೆಗೆ ಹಚ್ಚಿದ ಗೋರೋಚನದ ಬೊಟ್ಟು ಶಿವನ ಹಣೆ ಗಣ್ಣನ್ನು ಹೋಲುತ್ತಿತ್ತು. ಪಾದಗಳಿಗೆ ತೊಡೆದ ಅಲತಿಗೆಯ ರಸ ಅಶೋಕ ಪಲ್ಲವದ ಚೆಲುವನ್ನು ಕೊಟ್ಟಿತ್ತು. ಎದೆಯ ಮೇಲೆ ದೊಡ್ಡ ದೊಡ್ಡ ಮುತ್ತುಗಳ ಹಾರವನ್ನು ಹಾಕಿಕೊಂಡಿದ್ದಳು.

ಲೋಕೋತ್ತರ ಸುಂದರಿಯಾದ ಇವಳನ್ನು ಬ್ರಹ್ಮದೇವ ಮುಟ್ಟ ಬಾರದ ಕುಲದಲ್ಲಿ ಹುಟ್ಟಿಸಿದನೇಕೆ ? ಬಹುಶಃ ತನ್ನ ಕೈಮುಟ್ಟಿದರೆ ಕೆಟ್ಟೀತೆಂಬ ಭಯದಿಂದ, ತನ್ನ ಮಾನಸಹಸ್ತದಿಂದಲೇ ಈ ಲಾವಣ್ಯ ವತಿಯನ್ನು ಹುಟ್ಟಿಸಿರಬೇಕು. ಇಲ್ಲವಾದರೆ, ಕೈಮುಟ್ಟಿದ ದೋಷ ದಿಂದಾಗಿ ಈ ಕಾಂತಿ ಕಲಂಕಿತವಾಗದೆ ಉಳಿಯುತ್ತಿರಲಿಲ್ಲ. ಈಕೆ ಮುಟ್ಟಬಾರದ ಕುಲದಲ್ಲಿ ಹುಟ್ಟಿದ್ದಾಳೆ. ಅದರಿಂದ, ಎಷ್ಟೇ ಚೆಲುವೆ ಯಾದರೂ ದೂರದಲ್ಲಿಯೇ ಇರತಕ್ಕವಳೇ........... ಅಥವಾ, ಈಕೆ ಮುಟ್ಟಿದರೆ ಮಾಸುತ್ತಾಳೆ. ಮಾಸಿದರೆ ತನ್ನ ಸೌಂದರ್ಯ ಸೃಷ್ಟಿಗೆ ಭಂಗ ಬರುತ್ತಿದೆ. ಈಕೆ ದೂರದಲ್ಲಿದ್ದೇ ಭೂಲೋಕದ ಸಕಲ ಸುಂದರಿಯರನ್ನು ಸೋಲಿಸಲಿ ............ ಹೀಗೆನಾದರೂ ವಿಚಾರ

ಮಾಡಿರಬಹುದೇ ಬ್ರಹ್ಮ? ಇರಬಹುದು. ಹೀಗಾದರೆಯೇ ಈ ಸೌಂದರ್ಯ ಎಂದೆಂದಿಗೂ ಮಾಸದೆ ಮೀಸಲಾಗಿ ಮಿನುಗುತ್ತಲೇ ಇರ ಬಲ್ಲುದು........... !

ಅರಸು ಇನ್ನು ಏನೇನು ವಿಚಾರಿಸುತ್ತಿದ್ದನೋ! ಅಷ್ಟರಲ್ಲಿ ಚಾಂಡಾಲಕನ್ಯೆ ಕೋಕಿಲದ ದನಿ ಮಾಡುತ್ತ ಅರಸನಿಗೆ ನಮಸ್ಕಾರ ಮಾಡಿದಳು; ಅದೇ ರನ್ನದ ನೆಲಗಟ್ಟಿನ ಮೇಲೆ ಕುಳಿತಳು.

ಸಂಗಡಿಗ ಮುದುಕ ಗಿಳಿಯ ಪಂಜರವನ್ನು ಮುಂದೆ ಸರಿಸಿದ; ಅರಸನಿಗೆ ಬಿನ್ನಪಗೈದ— ದೇವಾ, ಈ ಗಿಳಿ ಸಕಲ ಶಾಸ್ತ್ರಗಳನ್ನು ಬಲ್ಲುದು; ರಾಜನೀತಿ ಪಾರಂಗತವಾಗಿದೆ. ಇತಿಹಾಸ – ಪುರಾಣ ಗಳನ್ನು ಸರಸವಾಗಿ ನಿರೂಪಿಸುತ್ತದೆ. ಸಂಗೀತ, ನಾಟಕ, ನೃತ್ಯ ಗಳನ್ನು ಒಳಿತಾಗಿ ತಿಳಿದಿದೆ. ವಿನೋದ ವಾಣಿಯಲ್ಲಿ ಎತ್ತಿದ ಕೈ, ನರ – ನಾರಿಯರ ಅಶ್ವಗಳ ಲಕ್ಷಣಗಳನ್ನು ಹೇಳುತ್ತಿದೆ. ವೀಣಾ, ಮೃದಂಗ ವಾದ್ಯಗಳನ್ನು ಬಾರಿಸುತ್ತಿದೆ. ಬಹಳವೇನು? ಭೂಲೋಕ ದಲ್ಲಿ ಇದರ ಹೆಸರು **ವೈಶಂಪಾಯನ.** ಇದೊಂದು ಅಮೌಲ್ಯ ರತ್ನವೇ ಸರಿ. ಪ್ರಭುಗಳಲ್ಲಿ ಹಲವಾರು ರತ್ನಗಳಿವೆ. ಇದೂ ಒಂದು ರತ್ನ ಸ್ವಾಮಿಯ ಸಂಗ್ರಹದಲ್ಲಿ ಇರಲಿ, ಎಂಬ ಹೆಬ್ಬಯಕೆಯಿಂದ ಈ ಕನ್ನಿಕೆ ಒಡೆಯರ ಅಡಿಗಳ ಎಡೆಗೆ ಬಂದಿದ್ದಾಳೆ. ದಯವಿಟ್ಟು ಈ ಕಾಣಿಕೆಯನ್ನು ಕೈಗೊಳ್ಳಬೇಕು.

ಆ ಕೂಡಲೆ ಗಿಳಿ ತನ್ನ ಬಲಗಾಲೆತ್ತಿ ದೊರೆಗೆ ಜಯಕಾರವನ್ನು ಹೇಳಿತು; ಮತ್ತು ಸುಶ್ರಾವ್ಯವಾಗಿ ನಿವೇದಿಸಿತು.

ಪಗೆವೆಣ್ದಿರೆಗಳ್ ಕಣ್ಣೀ।
(ರುಗೆ ಮೊಯುತ್ತಿರದೆ ಬಳಿಯ ಶೋಕಾನಲನಿಂ।)
ರುಗೆ ಮೊಯುತೆ ಬಳಿಯ ದುಗುಡ ಬೆಂಕಿಯ ಕತದಿಂ॥
ಬಗೆಯಲ್ ತೊರೆದಾ ಹಾರವ।
ನೊಗುಮಿಗೆ ತಪಮಿರ್ಪ ತೆರದೆ ತೋರುತ್ತಿರ್ಕುಂ॥

(ದೊರೆಗಳೇ ನಿಮ್ಮ ಶತ್ರು ಸ್ತ್ರೀಯರ ಎದೆಗಳು ಕಣ್ಣೀರಿಂದ

ಸ್ನಾನ ಮಾಡುತ್ತ, ಎದೆ ಬೆಂಕಿಯ ಸಮೀಪದಲ್ಲಿದ್ದು, ಆಹಾರವನ್ನು ತೊರೆದು, ತಪಸ್ಸನ್ನು ಮಾಡುತ್ತಿವೆಯೇ ಎನುವಂತೆ ತೋರುತ್ತಿವೆ.)

ಗಿಳಿಯ ಪ್ರತಿಭಾವಾಣಿಯಿಂದ ಅರಸನಿಗೆ ಅಚ್ಚರಿಯಾಯಿತು. ಆತನ ಪಕ್ಕದಲ್ಲಿಯೇ ನೀತಿ-ನಿಪುಣನಾದ ವೃದ್ಧ **ಕುಮಾರಪಾಲಿತ** ಮಂತ್ರಿ ಕುಳಿತಿದ್ದ. ದೊರೆ ಅವನನ್ನು ಕುರಿತು— ಈ ಶುಕದ ಸ್ಪಷ್ಟವಾಣಿಯನ್ನು ಸ್ವರ ಮಾಧುರ್ಯವನ್ನೂ ಕೇಳಿದಿರಾ? ಎಷ್ಟು ಸಾರ್ಥಕವಾದ ಶಬ್ದಗಳು! ಎಂತಹ ಆಲಂಕಾರಿಕ ಭಾಷೆ! ಸಾಮಾನ್ಯವಾಗಿ ಪಶು ಪಕ್ಷಿಗಳಿಗೆ ಊಟ ನಿದ್ದೆ ಅಂಜಿಕೆ ಮುಂತಾದುವುಗಳ ಮಟ್ಟಿಗೇ ಬುದ್ಧಿಯಿರುತ್ತದೆ. ಈ ಗಿಳಿಯ ಬುದ್ಧಿಬಲ ಲೋಕ ವಿಲಕ್ಷಣವಾಗಿದೆ. ತನ್ನ ಕಲ್ಪಕಶಕ್ತಿಯ ಬಲದಿಂದ ಕಾವ್ಯವನ್ನು ಕಟ್ಟಿ ಹಾಡಿತು. ಅಲ್ಲವೇ?

ಆಗ ಕುಮಾರಪಾಲಿತ ಮುಗುಳು ನಗುತ್ತ ಮಾತನಾಡಿದ— ದೇವಾ, ತಾವು ಹೇಳಿದುದು ಸರಿಯೇ. ಆದರೂ ಅದಕ್ಕಾಗಿ ಅಚ್ಚರಿ ಪಡಬೇಕಾಗಿಲ್ಲ. ಗಿಳಿ ಮೈನಾ ಹಕ್ಕಿಗಳು ಕಲಿಸಿದುದನ್ನು ಕಲಿತಂತೆ ನುಡಿಯುತ್ತಿವೆ. ಪೂರ್ವ ಸಂಸ್ಕಾರ ಬಲದಿಂದ ಅಥವಾ ಸಹವಾಸ ಬಲದಿಂದ ಇಲ್ಲವೆ ಸ್ವಪ್ರಯತ್ನದಿಂದ ಬುದ್ಧಿಬಲ ಕಲ್ಪಕತೆಗಳನ್ನು ಪಡೆಯಬಲ್ಲವು.

ಈ ಹೊತ್ತಿಗೆ ನಡುಹಗಲಿನ ಭೇರಿ ಬಾರಿಸಿತು. ಮಂಗಲಸ್ನಾನಕ್ಕಾಗಿ ಮಹಾರಾಜ ಎದ್ದ. ಆತನೊಡನೆಯೇ ಸಾಮಂತರಾಜರೂ ಸಜ್ಜಾದರು. ಅರಸು ಚಾಂಡಾಲಕನ್ನಿಕೆಗೆ ವಿಶ್ರಾಂತಿ ಪಡೆಯಲು ಹೇಳಿದ; ವೈಶಂಪಾಯನನ್ನು ಒಳಗೆ ಒಯ್ದು ಹಣ್ಣು-ಹಂಪಲು ತಿನ್ನಿಸು, ಎಂದು ತಾಂಬೂಲವಾಹಿನಿಗೆ ಅಪ್ಪಣೆಕೊಟ್ಟ. ಬಳಿಕ ಅರಸು ಮಿತ್ರರಾಜರೊಡನೆ ವ್ಯಾಯಾಮ ಶಾಲೆಗೆ ಹೋದ. ಅಲ್ಲಿ ಸಾಧಕಗಳನ್ನು ಮುಗಿಸಿ ಸ್ನಾನಗೃಹಕ್ಕೆ ದಯಮಾಡಿಸಿದ. ಮಣಿಮಯವಾದ ಆ ಗೃಹದಲ್ಲಿ ಬಿಳಿಬಟ್ಟೆಗಳ ಮೇಲ್ಕಟ್ಟು ಕಟ್ಟಿದ್ದರು, ಕುಳ್ಳಿರುವುದಕ್ಕೆ ಸ್ಫಟಿಕದ ಮಣೆ ಇಟ್ಟಿದ್ದರು, ಸುಗಂಧ ಜಲದಿಂದ

ತುಂಬಿದ ದೋಣಿಯಿತ್ತು, ನೀರೆರೆಯುವುದಕ್ಕೆ ಚಿನ್ನದ ತಂಬಿಗೆ ಇದ್ದುವು. ಅರಸು ಮಣೆಯ ಮೇಲೆ ಕುಳಿತ. ಕೂಡಲೆ ಪರಿಚಾರಿಕೆಯರು ಅತನ ಮೈಗೆ ನೆಲ್ಲಿ-ಮಲ್ಲಿಗೆ ಎಣ್ಣೆಗಳನ್ನು ಹೂಸಿದರು. ವಾರ ನಾರಿಯರು ಮಂಗಳಸ್ನಾನ ಮಾಡಿಸಲು ಮುಂದೆ ಬಂದರು. ಅವರು ಮಂಗಲ ಜಲಕಲಶಗಳನ್ನು ತುಂಬಿಕೊಂಡು ನಿಂತರು. ಕೆಲವರು ಕೋಮಲ ಕರಗಳಿಂದ ಆತನ ಮೈಯನ್ನು ತಿಕ್ಕುತ್ತಿದ್ದರು. ಹೊರಗೆ ಮಂಗಳವಾದ್ಯಗಳು ಮಧುರನಾದ ಮಾಡುತ್ತಿದ್ದುವು. ಈ ಆನಂದದ ಸನ್ನಿವೇಶಗಳಲ್ಲಿಯೇ ದೊರೆಯ ಮಂಗಳಸ್ನಾನ ಮುಗಿಯಿತು.

ಬಳಿಕ ಆತನು ಹಾವಿನ ಪರೆಗಿಂತಲೂ ತೆಳುವಾದ ಬಿಳಿಯ ರೇಶಿಮೆಯ ವಸ್ತ್ರಗಳನ್ನು ಉಟ್ಟು, ಅದೇ ತೆರನಾದ ಶಾಲನ್ನು ಹೊದೆದುಕೊಂಡ. ಬಳಿಕ ಗಂಧ - ಮಾಲಾದಿಗಳಿಂದ ಅಲಂಕೃತನಾಗಿ ಪಿತೃ ತರ್ಪಣ, ದೇವಪೂಜಾದಿಗಳನ್ನು ನೆರವೇರಿಸಿದ. ತರುವಾಯ ಮಿತ್ರರಾಜ ಸಹಿತವಾಗಿ ಪಂಚಪಕ್ವಾನ್ನಗಳ ಭೋಜನವಾಯಿತು. ತದನಂತರ ತಾಂಬೂಲವನ್ನು ಸವಿಯುತ್ತ ಚಂದ್ರಶಿಲಾ ಭವನಕ್ಕೆ ವಿಶ್ರಾಂತಿಗಾಗಿ ಆಗಮಿಸಿದ. ಅಲ್ಲಿ ಹಾಸಿಗೆ - ಹೊದಿಕೆ ಮೇಲ್ಕಟ್ಟು ಸುತ್ತುಮುತ್ತಲಿನ ಅಲಂಕಾರದ ಬೊಂಬೆಗಳು........ ಏನೆಲ್ಲವೂ ಬಿಳಿ ಬಣ್ಣದುವೇ.

—

## ೨. ಗಿಳಿಯ ಕರುಣ ಕಥೆ

ಶೂದ್ರಕ ಮಹಾರಾಜ ಶ್ವೇತ ಸುಪ್ಪತ್ತಿಗೆಯ ಮೇಲೆ ಕುಳಿತಿದ್ದ. ಸುತ್ತಲೂ ಮಿತ್ರರಾಜರ ಮಂತ್ರಿಗಳ ಪರಿವಾರ ಪಸರಿಸಿತ್ತು. ಗಿಳಿಯ ಮಧುರ ಮಾತುಗಳನ್ನು ಜೀವನ ಚರಿತ್ರವನ್ನು ಕೇಳಬೇಕೆಂದು ಕುತೂಹಲ ದೊರೆಗೆ. ಬೇಗನೆ ವೈಶಂಪಾಯನನನ್ನು ತರಲು ಕಂಚುಕಿಗೆ ಅಪ್ಪಣೆ ಮಾಡಿದ. ತುಸು ಹೊತ್ತಿನಲ್ಲಿ ಗಿಳಿಯ ಪಂಜರವನ್ನು ತಂದಿಟ್ಟರು. ಅರಸು ಆತುರದಿಂದ ಕೇಳಿದ—

ವೈಶಂಪಾಯನಾ, ಊಟ ಯಥೇಷ್ಟವಾಗಿ ಆಯಿತೇ ?

ಗಿಳಿ ಉತ್ತರಿಸಿತು— ಪ್ರಭುಗಳ ದಯೆಯಿಂದ ! ಕೇಳಬೇಕು–ಜೇಂಗೊಡದೊಳಗಿನ ರಾಯನೆಲ್ಲಿಕಾಯಿ ಪಾಕವನ್ನು, ಸೊಕ್ಕಿದ ಕೋಕಿಲೆಗಳ ಕಣ್ಣಿನ ಬಣ್ಣದ ಅರನೇರಿಲ ಹಣ್ಣುಗಳನ್ನು ಆನೆದಲೆಯೊಳಗಿನ ಮುತ್ತುಗಳನ್ನು ಹೋಲುವ ದಾಳಿಂಬ ಬೀಜಗಳನ್ನು ಮಹಾರಾಣಿಯವರು ಮಮತೆಯಿಂದ ತಾವಾಗಿಯೇ ತಿನ್ನಿಸಿದರು. ಅವರ ಅಮೃತಕರ ಮುಟ್ಟಿದ್ದರಿಂದ ಅವೆಲ್ಲವೂ ಅಮೃತಕ್ಕಿಂತಲೂ ಸವಿಯಾಗಿದ್ದುವು.

ಅರಸನಿಗೆ ಆನಂದವಾಯಿತು. ಒಳ್ಳೆಯದು; ವೈಶಂಪಾಯನಾ, ನಿನ್ನ ಹಿಂದು-ಮುಂದಿನ ಕತೆಯೆಲ್ಲವನ್ನು ಕೇಳಬೇಕೆನಿಸುತ್ತಿದೆ. ಎಲ್ಲವನ್ನು ವಿವರವಾಗಿ ಹೇಳುವಿಯಾ ? — ಎಂದ ದೊರೆ.

ಪ್ರಭುವೇ, ಅದೊಂದು ದೊಡ್ಡ ರಾಮಾಯಣ; ರಗಳೆಯ ರಾಮಾಯಣವೆಂದು ತಮಗೆ ಬೇಸರ ಬರಬಹುದೇನೋ ! ಆದರೂ ಅಪ್ಪಣೆ ಕೊಡಿಸಿದಂತೆ ಸ್ವಲ್ಪದರಲ್ಲಿಯೇ ಸ್ವಾರಸ್ಯವಾಗಿ ಹೇಳುವೆ. ಚಿತ್ತಯಿಸಬೇಕು—

ಮೂಡಣ ಕಡಲಿನಿಂದ ಪಡುವಣ ಕಡಲಿನ ವರೆಗೆ ವಿಂಧ್ಯಾಟವಿ ಹಬ್ಬಿದೆ. ಅದೊಂದು ದೊಡ್ಡ ಅರಣ್ಯ. ಮೆಣಸು, ಲವಂಗ, ತಮಾಲ ವೃಕ್ಷಗಳ ಪುನುಗು–ಕಸ್ತೂರೀ ಮೃಗಗಳ ಸುಗಂಧದಿಂದ ಅಡವಿಯೆಲ್ಲ ಗಮಗಮಿಸುತ್ತಿದೆ. ಅಲ್ಲಿ ಕಾಡಾನೆಗಳ ಮದಜಲದಿಂದ ನೆಲ ಯಾವಾಗಲೂ ನೆನೆದಿರುತ್ತಿದೆ. ಆದರಿಂದ ಅಲ್ಲಿಯ ವೃಕ್ಷಗಳು ಮುಗಿಲನ್ನು ಮುದ್ದಿಸುವಂತೆ ಬೆಳೆದಿವೆ. ಅಡಕೆ, ತೆಂಗು, ಕೇದಗಿ, ಕಣಗಿಲು, ಬಕುಲ ಮುಂತಾಗಿ ವನಸಿರಿಯ ಮುಡಿಗೆ ಮೀಸಲು ಹೂಗಳನ್ನು ಒದಗಿಸುತ್ತಿವೆ. ದಣಿದು ಬಂದ ದಾರಿಕಾರರನ್ನು ತಣಿಸುವುದಕ್ಕಾಗಿ ಅಲ್ಲಲ್ಲಿ ಲವಂಗ–ಲತೆಗಳ ಮಲ್ಲಿಗೆಗಳ ಮಂಟಪಗಳಿವೆ. ಬಗೆ ಬಗೆಯ ಹಕ್ಕಿ – ಪಕ್ಕಿಗಳು ಇಂಚರದಿಂದ ಹಾಡುತ್ತಿರುತ್ತಿವೆ. ಅಲ್ಲಲ್ಲಿ ಗಿರಿ–ನದಿಗಳು ಮಂಜುಳ ದನಿಗೈಯುತ್ತ ಹರಿಯುತ್ತಿರುತ್ತಿವೆ.

ಅದು ಕಾಡಿನ ಕ್ರೂರ ಮೃಗಗಳಿಗೆ ಗೂಡಾಗಿರುವಂತೆ, ಮುಕ್ತಿಸಾಧಕ ರಾದ ಮುನಿಗಳ ಬೀಡೂ ಆಗಿದೆ.

ಇಂತಹ ವಿಂಧ್ಯದಲ್ಲಿ ದಂಡಕಾರಣ್ಯವಿದೆ. ಅದರ ಮೇರೆಯಲ್ಲಿ ಲೋಕಪಾವನನಾದ ಅಗಸ್ತ್ಯ ಋಷಿಯ ಆಶ್ರಮವುಂಟು. ವಿಂಧ್ಯ ಪರ್ವತ ಆತನನ್ನು ಗುರುವೆಂದು ತಲೆಬಾಗಿಸಿದೆ. ಆತನ ಧರ್ಮಪತ್ನಿ ಲೋಪಾಮುದ್ರೆ ಆಶ್ರಮದ ಸುತ್ತುಮುತ್ತು ಹೂ-ಹಣ್ಣುಗಳ ಗಿಡ-ಬಳ್ಳಿ ಗಳನ್ನು ಹಚ್ಚಿದ್ದಾಳೆ; ಅವುಗಳಿಗೆ ತಾನೇ ಕೈನೀರೆರೆಯುತ್ತ ಮಕ್ಕಳಂತೆ ಬೆಳೆಸಿದ್ದಾಳೆ. ಸಮೀಪದಲ್ಲಿಯೇ ಗೋದಾವರೀ ನದಿ ಹರಿಯುತ್ತ ಲಿದೆ. ಈ ಪವಿತ್ರ ಕ್ಷೇತ್ರದಲ್ಲಿ ಶ್ರೀರಾಮಚಂದ್ರ ಮುನಿಸೇವೆಯನ್ನು ಮಾಡುತ್ತಿದ್ದನೆಂತೆ. ಮುಂದೆ ಅವನು ಸೀತೆಯನ್ನು ಅಗಲಿದ ಮೇಲೆ ಮನಸ್ಸಮಾಧಾನಕ್ಕಾಗಿ ಆಕೆಯ ಪ್ರತಿಮೆಯನ್ನು ಮಾಡಿ ಇಟ್ಟಿದ್ದನೆಂತೆ. ಅದು ಈಗಲೂ ಅಲ್ಲಿ ಇದೆ.

ಅಗಸ್ತ್ಯರ ಆಶ್ರಮದ ಸಮೀಪದಲ್ಲಿಯೇ ಪಂಪಾ ಸರೋವರವಿದೆ. ಅದರಲ್ಲಿ ಕುಮುದ ಕುವಲಯ ಕಲ್ಹಾರಗಳು ಕಂಗೊಳಿಸುತ್ತಿವೆ. ಸಾರಸಪಕ್ಷಿಗಳ ಮಧುರ ಗಾನ, ಕಲಹಂಸ ಕಾಮಿನಿಯರ ಕ್ರೀಡಾ ಕೋಲಾಹಲಗಳಿಂದ ಸರೋವರದ ಜಲ ತರಂಗಗಳು ಇಂಪಾಗಿ ಹಾಡುವಂತೆ ಭಾಸವಾಗುತ್ತಿದೆ.

ಈ ಸರೋವರದ ಪಡುವಣ ದಂಡೆಯ ಮೇಲೆ ಹಳೆಯದೊಂದು ಎತ್ತರವಾದ ಬೂರುಗ ಮರವಿದೆ. ಅದರ ಬುಡದಲ್ಲಿ ದಿಗ್ಗಜಗಳ ಸೊಂಡಿಲದಂತೆ ದಪ್ಪವಾದ ಹೆಬ್ಬಾವು ಸುತ್ತಿ ಹಾಕಿಕೊಂಡಿದೆ. ಅದ ರಿಂದ ಆ ಮರಕ್ಕೆ ದೊಡ್ಡದೊಂದು ಪತೆಯನ್ನು ಕಟ್ಟಿದಂತೆ ತೋರು ತ್ತಿದೆ. ಮರದ ಟೊಂಗೆಗಳು ದಿಕ್ಕು ದಿಕ್ಕುಗಳಲ್ಲಿ ದೂರ ದೂರದ ವರೆಗೆ ಪಸರಿಸಿವೆ; ಮಾರುಗೈ ಹಾಕಿ ದಿಗಂತರವನ್ನು ಅಳೆಯು ತ್ತಿವೆಯೋ ಎಂಬಂತೆ ತೋರುತ್ತಿವೆ. ಮರದ ತಳದಿಂದ ತುದಿಯ ವರೆಗೆ ಹಲವಾರು ಬಳ್ಳಿಗಳು ಹಬ್ಬಿವೆ. ಮುಪ್ಪಿನ ಕಾಲದಲ್ಲಿ ಮೈ ಮೇಲೆ ನರಗಳು ಎದ್ದು ಕಾಣುವಂತೆ ಅದರ ಮುಳ್ಳುಗಳು ನರವುಲಿ

ಗಳಂತೆ ತೋರುತ್ತಿವೆ. ಅದರ ತಲೆಯ ಮೇಲಿನ ಅರಳೆ, ಸೂರ್ಯನ ಕುದುರೆಗಳ ಬಾಯಿಂದ ಬಿದ್ದ ನೊರೆಯಂತೆ ಕಂಗೊಳಿಸುತ್ತಿದೆ. ಒಟ್ಟಾರೆ, ಆ ಶಾಲ್ಮಲೀ ವೃಕ್ಷವನ್ನು ದಂಡಕಾರಣ್ಯದ ದೊರೆ, ತರು ಲತೆಗಳ ನಾಯಕ, ವಿಂಧ್ಯಪರ್ವತದ ಜೀವದ ಜೊತೆಗಾರ ಎಂದು ಧಾರಾಳವಾಗಿ ಹೇಳಬಹುದು.

ಆ ಮರದ ಹೊದರು, ಹೊದೆ-ಪೊದರೆಗಳಲ್ಲಿ ನಾನಾ ದೇಶಗಳಿಂದ ಬಂದ ಗಿಳಿ, ಗೊರವಂಕ ಮೊದಲಾದ ಹಕ್ಕಿಗಳು ಗೂಡು ಕಟ್ಟಿ ಕೊಂಡಿವೆ. ಆ ಮುಳ್ಳಿಡಿದ ಮರವನ್ನು ಏರುವುದು ಎಂತಹರಿಗೂ ಅಸಾಧ್ಯವಾಗಿತ್ತು. ಅದರಿಂದ, ಗೂಡಿನಲ್ಲಿಯ ಹಕ್ಕಿಗಳಿಗೆ ಪ್ರಾಣ ಭಯವೇ ಇರಲಿಲ್ಲ. ಮರದ ಎಲೆ ಉದುರಿ ಹೋಗಿದ್ದುವು. ಈ ಗಿಳಿಗಳೇ ಅದರ ಹಸುರೆಲೆಗಳಂತೆ ಕಾಣುತ್ತಿದ್ದುವು.

ಹಕ್ಕಿಗಳು ಪಕ್ಕ ಬಾರದ ಮರಿಗಳನ್ನು ಗೂಡಿನಲ್ಲಿ ಬಿಡುತ್ತಿದ್ದುವು. ಆಹಾರವನ್ನು ಹುಡುಕುವುದಕ್ಕೆ ಬೆಳಗಿನ ಜಾವದಲ್ಲಿಯೇ ಹೊರಗೆ ಹಾರಿ ಹೋಗುತ್ತಿದ್ದುವು. ಆಹಾರ ದೊರೆತ ಕೂಡಲೆ ಗೂಡಿಗೆ ಬಂದು ಮರಿಗಳಿಗೆ ಗುಟುಕು ಕೊಡುತ್ತಿದ್ದುವು. ಪಕ್ಕದಲ್ಲಿ ಮರಿ ಗಳನ್ನು ಇಟ್ಟುಕೊಂಡು ಮಲಗುತ್ತಿದ್ದುವು. ಹೀಗೆಯೇ ಸುಖವಾಗಿ ಅವುಗಳ ಬಾಳು ಸಾಗಿತ್ತು.

ನನ್ನ ಮುಪ್ಪಿನ ತಂದೆ ನನ್ನ ತಾಯಿಯೊಡನೆ ಅದೇ ಮರದ ಒಂದು ಹೊದರಿನಲ್ಲಿ ಇರುತ್ತಿದ್ದ. ಆತನಿಗೆ ಬಹು ಕಾಲದ ಮೇಲೆ ನಾನೊ ಬ್ಬನೇ ಮಗ ಹುಟ್ಟಿದೆ. ನನ್ನ ಜನ್ಮವಾಗುತ್ತಲೇ ನನ್ನ ತಾಯಿ ಬಾಣತಿಯ ಬೇನೆಯಿಂದ ತೀರಿಕೊಂಡಳು. ಹೆಂಡತಿಯನ್ನು ನೆನೆ ನೆನೆದು ತಂದೆ ಬಹಳ ದುಃಖಿಸಿದ. ಆದರೂ ತಬ್ಬಲಿಯಾದ ನನ್ನನ್ನು ಬಹಳ ಮಮತೆಯಿಂದ ಕಾಪಾಡಿದ. ಮುಪ್ಪಿನಿಂದ ಆತನ ರೆಕ್ಕೆಯ ಕೆಲವು ಗರಿಗಳು ಉದುರಿದ್ದುವು; ಉಳಿದುವು ಸಡಿಲಾಗಿದ್ದುವು. ದೂರ ಹಾರುವ ಶಕ್ತಿ ಉಳಿದಿರಲಿಲ್ಲ. ಅಲ್ಲದೆ, ಬಿರುಸು ಪದಾರ್ಥ ಗಳನ್ನು ಕುಕ್ಕಿ ಕುಕ್ಕಿ ಆತನ ಚಂಚುಪುಟ ಮೊಂಡವಾಗಿತ್ತು. ಆದುದ

ರಿಂದ ಹೊತ್ತು ನೋಡಿಕೊಂಡು ಮರದ ತಳಕ್ಕೆ ಇಳಿಯುತ್ತಿದ್ದ; ಬೇರೆ ಹಕ್ಕಿಗಳು ತಿನ್ನುವಾಗ ಉದುರಿದ ಕಾಳು-ಕಡಿಗಳನ್ನು ಹಣ್ಣು-ಹಂಪಲು ಚೂರುಗಳನ್ನು ತರುತ್ತಿದ್ದ; ನನಗೆ ಗುಟುಕು ಕೊಡುತ್ತಿದ್ದ. ಉಳಿದರೆ ತಾನು ತಿನ್ನಬೇಕು; ಇಲ್ಲವಾದರೆ ಉಪವಾಸ ಮಲಗಬೇಕು. ಹೀಗೆ ನಡೆದಿತ್ತು ನಮ್ಮ ಬರಡು ಬಾಳು.

ಅದೊಂದು ಮುಂಜಾವ. ಚಂದ್ರ ಮುಳುಗುತ್ತಿದ್ದ; ಸೂರ್ಯ ಬೆಳಕನ್ನು ಬೀರುತ್ತ ಮೇಲೆ ಬರುತ್ತಿದ್ದ. ಎಳ ಬಿಸಿಲಿನಿಂದ ಅಡವಿಯೆಲ್ಲ ಅಂದವಾಗಿ ಕಾಣುತ್ತಿತ್ತು. ತುಂಬಿಗಳು ತಾವರೆಗಳ ಮೇಲೆ ಝೇಂಕರಿಸ ಹತ್ತಿದುವು. ನವಿಲು ನರ್ತಿಸತೊಡಗಿದುವು. ಸಿಂಹ ಗರ್ಜಿಸುತ್ತ ಆಕಳಿಸುತ್ತಿದ್ದುವು. ಮಲಗಿದ ಮದಗಜಗಳನ್ನು ಹೆಣ್ಣಾನೆಗಳು ಎಚ್ಚರಿಸುತ್ತಿದ್ದುವು. ತಪೋವನದ ಹೋಮಗಳ ಹೊಗೆ ಮರಗಳ ಮೇಲೆ ಹಾಯುತ್ತಿತ್ತು. ಮಂದ ಮಾರುತ ಗಂಧವನ್ನು ಹೊತ್ತು ಮೆಲ್ಲ ಮೆಲ್ಲನೆ ಸಾಗಿತ್ತು. ಹಕ್ಕಿಗಳು ಹರುಷದಿಂದ ಮುಗಿಲಲ್ಲ ಹಾರಾಡತೊಡಗಿದುವು. ಚಿಗರೆ ಹಿಂಡು ಮನಬಲ್ಲಂತೆ ತಿರುಗಾಡುತ್ತಿತ್ತು.

ಇಷ್ಟಾಗುವುದರೊಳಗೆ ಒಂದು ಜಾವ ಹೊತ್ತು ಏರಿತು. ಹಕ್ಕಿಗಳೆಲ್ಲ ಆಹಾರಕ್ಕಾಗಿ ಗೂಡಿನಿಂದ ಹಾರಿ ಹೋದುವು. ಕೆಲ ಹೊತ್ತು ಬೂರಲ ಮರ ನಿಃಶಬ್ದವಾಗಿತ್ತು. ನನ್ನ ತಂದೆ ನಾನು ಮೌನವಾಗಿ ಗೂಡಿನಲ್ಲಿಯೇ ಇದ್ದೆವು.

ಇದ್ದಕ್ಕಿದಂತೆ ಕಾಡು ಬಿರಿಯುವಂತೆ ಬೇಟೆಗಾರರ ಕೋಲಾಹಲ ಕೇಕೆಗಳು ಕೇಳಹತ್ತಿದುವು. ಆ ಘೋರಗರ್ಜನೆಯಿಂದ ಕಾಡಿನ ಕ್ರೂರ ಮೃಗಗಳು ಕೂಡ ಹೌಹಾರಿದುವು; ಹೆದರಿ ಚೀರಾಡಹತ್ತಿದುವು. ಅದರಿಂದ ಆ ಕೋಲಾಹಲ ಮತ್ತಿಷ್ಟು ಭಯಂಕರವಾಯಿತು. ಆ ಗುಡುಗಾಟದಿಂದ ನನ್ನ ಎದೆ ನಡುಗಿತು. ಮೆತ್ತಗೆ ಸರಿದು ತಾತನ ಹರುಕು ಮುರುಕು ಪಕ್ಕದೊಳಗೆ ಹೊಕ್ಕುಕೊಂಡೆ.

ಬೇಟೆಗಾರರ ಕೋಲಾಹಲ ಕ್ಷಣಕ್ಷಣಕ್ಕೆ ಹೆಚ್ಚುತ್ತಿತ್ತು. ಅವರು

ಹುಚ್ಚೆದ್ದು ಕೂಗಾಡುತ್ತಿದ್ದರು— ಇನ್ನೇಕೆ ತಡ? ಹೊರಗಿಂದ ಹಾಯ್ದು ಕಣಿವೆಯ ಬಾಯಿಕಟ್ಟಿರಿ. ಗುಡ್ಡದ ಓರೆಯ ಮೇಲೆ ಅಡ್ಡಾಡಿರಿ. ಮರಹತ್ತಿ ನೋಡಿರಿ. ಕೊರಳ ಕುಣಿಕೆ ಬಿಚ್ಚಿ ನಾಯಿಗಳನ್ನು ಬಿಡಿರಿ. ಬಿಲ್ಲು ಬಾಣ ಹಿಡಿದು ಬೆನ್ನಟ್ಟಿರಿ. ಕವಣೆ ಹೊಡೆಯಿರಿ....ಕಡಿ, ಕೊಲ್ಲು, ತಿವಿ, ಎಳೆ....ಮುಂತಾದ ಬಿರುನುಡಿಗಳಿಂದ ಅಡವಿಯೆಲ್ಲ ಅಲ್ಲೋಲ ಕಲ್ಲೋಲವಾಯಿತು.

ಭಿಲ್ಲರ ಬಾಣಗಳಿಂದ ಗಾಯಗೊಂಡ ಸಿಂಹಗಳು ಗರ್ಜಿಸುತ್ತಿದ್ದುವು. ಹಿಂಡನಗಲಿದ ಸೊಕ್ಕಾನೆಗಳು ಘೀಳಿಡುತ್ತಿದ್ದುವು. ಕಂಗೆಟ್ಟ ಚಿಗರೆಗಳು ಚೀತ್ಕಾರ ಮಾಡುತ್ತಿದ್ದುವು. ಕಾಡಾಕಳು ಕರುಗಳನ್ನು ಹುಡುಕುತ್ತ ಅಂಬಾ ಎಂದು ಗೋಳಿಡುತ್ತಿದ್ದುವು. ಸಾವಿಗಂಜಿದ ಸಾವಿರಾರು ಹಕ್ಕಿಗಳು ರೆಕ್ಕೆಗಳನ್ನು ಫಡಫಡಿಸುತ್ತ ನೆಲೆಸಿಕ್ಕದೆ ಅತ್ತಿತ್ತ ಹಾರಾಡುತ್ತಿದ್ದುವು. ಬೇಟೆಗಾರರು ಎಡೆಬಿಡದೆ ಝೇಂಕರಿಸುವ ಬಿಲ್ಲು ಬಾಣಗಳ ದನಿ, ಕಾಡುಕೋಣಗಳ ಕೋಡುಗಳಿಗೆ ಅಪ್ಪಳಿಸುವ ಖಡ್ಗಗಳ ಠಣತ್ಕಾರ ಬೇಟೆ ನಾಯಿಗಳ ಬೊಗಳಿಕೆಯ ಬೊಬ್ಬೆ.... ಎಲ್ಲವೂ ಒಟ್ಟಾಗಿ ಅಡವಿಯನ್ನೆಲ್ಲ ಅಬ್ಬರಿಸಿ ಬಿಟ್ಟಿತು.

ಅದೇಕೋ, ಅಡವಿ ಇದ್ದಕ್ಕಿದ್ದಂತೆ ಶಾಂತವಾಯಿತು. ಹಾಗೆಯೇ, ನನ್ನ ಎದೆ ನಡುಗೂ ಕಡಿಮೆ ಆಯಿತು. ನನ್ನ ಹುಡುಗತನದ ಕುತೂಹಲಕ್ಕೆ ತಕ್ಕಂತೆ, ತಂದೆಯ ಪಕ್ಕದಿಂದ ಹೊರಬಂದೆ; ದಿಕ್ಕು ದಿಕ್ಕುಗಳತ್ತ ನೋಡತೊಡಗಿದೆ. ಆಗ ಮತ್ತೊಂದೆಡೆಯಿಂದ ಕರಾಲಕಾಲನ ಬಂಟರನ್ನು ಹೋಲುವ ಬೇಪ ಪಡೆ ನಡೆದು ಬರುತ್ತಿತ್ತು. ಆ ಪಡೆಯ ನಡುವೆ ಕರಾಲ ಕಾಲನೇ ಬಂದಂತೆ ಬೇಡರೊಡೆಯ ನಡೆತರುತ್ತಿದ್ದ. ಅವನಿಗೆ ಅದೇ ಆಗ ಹೊಸ ಹರಯ; ಹುರಿಯಾದ ಮೈ ಕಟ್ಟು; ಕಬ್ಬಿಣದ ಗಂಡು ಗೊಂಬೆಯಂತೆ ತೋರುತ್ತಿದ್ದ. ಗುಂಗುರು ಕೂದಲು ಕೆದರಿ ಕೆರಳಿದ ಕೇಸರಿಯನ್ನು ಹೋಲುತ್ತಿದ್ದ. ಅವನ ಅಕ್ಕ-ಪಕ್ಕದಲ್ಲಿ, ತೇಕುವ ಬೇಟೆಯ ನಾಯಿಗಳು ತೆರೆದ ನಾಲಗೆಯಿಂದ ಅನುಸರಿಸಿ ಬರುತ್ತಿದ್ದುವು. ಒಡೆಯನನ್ನು ಹಿಂಬಾಲಿಸಿ

ಬರುವ ಭಿಲ್ಲರು ಚಮರೀ ಮೃಗಗಳ ಕೂದಲನ್ನೂ ಆನೆ ಹಲ್ಲುಗಳನ್ನೂ ಗಂಟು ಕಟ್ಟಿಕೊಂಡಿದ್ದರು. ಕೆಲವರು ಜೇನು ಹುಟ್ಟುಗಳನ್ನು ಎಲೆ ದೊನ್ನೆಯೊಳಗೆ ಹಾಕಿಕೊಂಡಿದ್ದರು. ಹಲವರು ಹುಲಿದೊಗಲು, ಹುಲಿಯುಗುರು, ಸಿಂಹದ ಚರ್ಮ, ಸಾರಂಗದ ಕೋಡು, ನವಿಲುಗರಿ ಮುಂತಾದುವನ್ನು ಹಿಡಿದಿದ್ದರು. ಅವರೆಲ್ಲ ಕರಿಯ ಬಟ್ಟೆಯನ್ನು ಹೊದೆದು, ತಲೆಗೆ ನವಿಲು ಗರಿಯ ತುರಾಯಿ ಚುಚ್ಚಿಕೊಂಡಿದ್ದರು. ಇಂತಹ ಭೀಮಕಾಯದ ಬೇಡರ ಒಡೆಯನ ಹೆಸರು **ಮಾತಂಗ.** ಎಂದು ಆ ಮೇಲೆ ತಿಳಿಯಿತು. ಇದು ಅವನ ಆಕಾರಕ್ಕೆ ತಕ್ಕಂತೆಯೇ ಇತ್ತು.

ಬೇಡಪಡೆ ಸಾವಕಾಶವಾಗಿ ನಾವಿದ್ದ ಮರದ ಕೆಳಗೇ ನಿಂತಿತು. ಒಡೆಯ ವಿಶ್ರಾಂತಿಗಾಗಿ ಹಾಸಿಗೆಯ ಮೇಲೆ ಕುಳಿತ; ಬಿಲ್ಲು – ಬಾಣ ಗಳನ್ನು ಪಕ್ಕದಲ್ಲಿ ಇಟ್ಟುಕೊಂಡ. ಭಿಲ್ಲನೊಬ್ಬ ಕಮಲಪತ್ರದಲ್ಲಿ ನೀರನ್ನು ತುಂಬಿ ತಂದ; ಒಡೆಯನಿಗೆ ಕೊಟ್ಟ. ಹಸಿವೆಯನ್ನು ಹಿಂಗಿಸಲು ಮತ್ತನೆಯ ಕಮಲ ನಾಳಗಳನ್ನು ತಂದಿದ್ದ. ನಾಯಕನ ಉಪಾಹಾರ ಮುಗಿಯಿತು. ತುಸು ಹೊತ್ತಿನ ಮೇಲೆ ಅವರೆಲ್ಲ ಹೊರಟು ಹೋದರು. ಆ—ದ—ರೆ ?

ಮುದಿಬೇಡನೊಬ್ಬ ಅಷ್ಟು ಹೊತ್ತಿನ ವರೆಗೂ ಮರದ ಮತ್ತೊಂದು ಮರೆಯಲ್ಲಿ ನಿಂತಿದ್ದ. ಬೇಡರ ಗುಂಪು ಕಣ್ಮರೆಯಾಗುತ್ತಲೇ ಆ ಯಮನಾಳು ಬಯಲಿಗೆ ಬಂದ. ಅಂದು ಅವನಿಗೆ ಮಾಂಸವೇ ದೊರೆತಿರಲಿಲ್ಲ. ಮರದ ಮೇಲಿನ ಹಕ್ಕಿಗಳ ಆಯುಷ್ಯವನ್ನೇ ಕುಡಿ ಯುವ ಕಣ್ಣುಗಳಿಂದ ತಳದಿಂದ ತುದಿಯವರೆಗೆ ನೋಡುತ್ತ ನಿಂತ. ಎತ್ತಲಿಂದ ಏರಬೇಕೆಂಬುದನ್ನು ಯೋಚಿಸುತ್ತಿದ್ದಂತೆ ತೋರುತ್ತಿತ್ತು ಗೂಡಿನಲ್ಲಿದ್ದ ಗಿಳಿ ಮರಿಗಳ ಜೀವ ನೆತ್ತಿಯಿಂದಲೇ ಹಾರಿಹೋಯಿತು.

ದೊರೆಯೇ, ಕ್ರೂರ ಕರ್ಮಿಗಳಿಗೆ ಯಾವ ಕೆಡುಗೆಲಸವೂ ಕಠಿನ ವಾಗಿಲ್ಲ. ಆ ಶಾಲ್ಮಲೀ ವೃಕ್ಷ ಎಷ್ಟೋ ತಾಳೆ ಮರಗಳಷ್ಟು ಎತ್ತರ ವಿತ್ತು; ಅದರ ತಳದಿಂದ ತುದಿತನಕ ಮುಳ್ಳುಗಳಿದ್ದುವು. ಆದರೂ

ಆ ಮುದಿರಕ್ಕಸ ಮರವನ್ನು ಸರಸರ ಏರಿದ. ಪುಚ್ಚ ಬಾರದ ತೀರ ಎಳೆಯ ಕೆಂಬಣ್ಣದ ಮರಿಗಳು ಆ ಮರದ ಹೂಗಳಂತೆ; ಹಸುರು ಪುಚ್ಚ ಬಂದರೂ ಹಾರುವ ಶಕ್ತಿಯಿಲ್ಲದ ಮರಿಗಳು ಅದರ ಕಾಯಿಗಳಂತೆ ತೋರುತ್ತಿದ್ದುವು. ಆ ಯಮದೂತ ಗೂಡಿನೊಳಗೆ ಕೈ ಹಾಕುತ್ತ, ಎಳೆ ಮರಿಗಳನ್ನು ಎಳೆದೆಳೆದು ಕೊಂದು ನೆಲದ ಮೇಲೆ ಚೆಲ್ಲಿದ.

ಆ ಕೊಲೆಗಡುಕನ ಕಣ್ಣು ನಮ್ಮ ಕಡೆಗೆ ಹೊರಳಿತು. ನಮ್ಮ ಕೊನೆಗಾಲವೇ ಬಂದಿತೆಂದು ನನ್ನ ತಂದೆ ಕಣ್ತುಂಬ ನೀರು ತಂದ. ನನ್ನ ನೆನಪಾದಾಗಲಂತೂ ಅವನ ಅಳುವು ಇಮ್ಮಡಿಸಿತು. ಮಾತೇ ಬರಲಿಲ್ಲ. ನನ್ನನ್ನು ತನ್ನ ಎದೆಗೆ ಅವಚಿಕೊಂಡ; ಪಕ್ಕದೊಳಗಿಟ್ಟುಕೊಂಡು ಕಣ್ಣೀರು ಕರೆಯುತ್ತ ನಡುಗಹತ್ತಿದ.

ಅಷ್ಟರೊಳಗೆ, ಕರಿಯ ಹಾವು ಗೂಡಿನೊಳಗೆ ಬಂದಿತೋ ಎನುವಂತೆ, ಕಾಡು ಹಂದಿಯ ನೆಣದಿಂದ ಹೊಲಸು ನಾರುವ ಕೈಯನ್ನು ನಮ್ಮ ಗೂಡಿನೊಳಗೆ ಸೇರಿಸಿದ ಕಲ್ಲೆದೆಯ ಕಟುಕ. ನನ್ನ ತಂದೆ ಕೊನೆಯ ಉಪಾಯವೆಂದು ತನ್ನ ಮೊಂಡ ಚುಂಚುವಿನಿಂದಲೇ ಅವನ ಕೈಯನ್ನು ಕಚ್ಚಿದಾ, ಸಡಿಲಾದ ರೆಕ್ಕೆಗಳಿಂದ ಫಡಫಡನೆ ಬಡಿದ! ಅಷ್ಟಕ್ಕೆ ಆ ಚಾಂಡಾಲ ಬೆದರಲಿಲ್ಲ. ನನ್ನ ಮುದಿ ತಂದೆಯನ್ನು ಹಿಡಿದು ಹೊರಗೆಳೆದು ಗೋಣು ಮುರಿದು ಕೆಳಕ್ಕೆ ಚೆಲ್ಲಿಬಿಟ್ಟ? ನಾನು ತಂದೆಯ ಪಕ್ಕದೊಳಗೆ ಅಡಗಿಕೊಂಡಿದ್ದೆ. ನನ್ನ ಆಯುಷ್ಯ ಸೂತ್ರವೂ ಗಟ್ಟಿಯಾಗಿದ್ದಿತೇನೋ! ಆ ಕ್ರೂರ ಕರ್ಮಿ ನನ್ನನ್ನು ನೋಡಲಿಲ್ಲ. ನಾನು ತೂರಿ ಬಿದ್ದುದೂ ತರಗೆಲೆಯ ರಾಶಿಗಳ ಮೇಲೆ. ಎಳ್ಳನಿತೂ ಪೆಟ್ಟು ತಾಕಲಿಲ್ಲ.

ಆ ಬೇಡ ಇನ್ನೂ ಕೆಳಗೆ ಇಳಿದಿರಲಿಲ್ಲ. ನಾನು ಕಲ್ಲೆದೆಯ ಕಟುಕನಂತೆ, ಹೆತ್ತು ಸಲುಹಿದ ತಂದೆಯನ್ನು ತೊರದೆ. ಅತ್ತಿತ್ತ ಸರಿದಾಡುತ್ತ ತರಗೆಲೆಯ ರಾಶಿಯೊಳಗೆ ಸೇರಿದೆ. ಹಾಗೆಯೇ ಮುಂದುವರಿಯುತ್ತ ಆ ಮೂಲ ವೃಕ್ಷದ ಬುಡದಲ್ಲಿ ಮರೆಯಾಗಿ ಕುಳಿತೆ.

ಬೇಡ ಕೆಳಕ್ಕೆ ಇಳಿದ. ನೆಲದ ಮೇಲೆ ಸತ್ತು ಬಿದ್ದ ಗಿಳಿಗಳನ್ನು ಆರಿಸಿಕೊಂಡ; ಎಲೆಯಲ್ಲಿ ಸುತ್ತಿಕೊಂಡು ಬಳ್ಳಿಗಳಿಂದ ಹೊರೆ ಮಾಡಿದ. ಅವನ್ನು ಹೊತ್ತುಕೊಂಡು ಬೇಡನಾಯಕ ಹೋದ ಹಾದಿಯಲ್ಲಿ ಸರಸರ ಮುನ್ನಡೆದ. ನಾನು ತರಗೆಲೆಯ ರಾಶಿಯಲ್ಲಿದ್ದೆ. ಬಣ್ಣದ ಬೆರಕೆಯಿಂದ ನಾನು ಅವನ ಕಣ್ಣಿಗೆ ಕಾಣಲಿಲ್ಲ.

ಆ ಮೇಲೆ ಮಾತ್ರ ನನಗೆ ತಂದೆಯ ನೆನಪಾಯಿತು. ಮೇಲಿಂದ ಕೆಳಗೆ ಬೀಳುವ ಭಾರಕ್ಕೆ ತುಸು ಮೈ ನೋವೂ ಆಗಿತ್ತು. ಕಣ್ಣು ಹನಿಗೂಡಿದುವು. ಅಂತಹ ಕರುಣ ಸನ್ನಿವೇಶದಲ್ಲಿಯೂ ನನಗೆ ನೀರಡಿಕೆ ಆಯಿತು. ಬದುಕುವ ಆಸೆ ಬಲವಾಗಿತ್ತು. ಮೆಲ್ಲನೆ ಸರೋವರದ ದಾರಿಯಲ್ಲಿ ಸಾಗಹತ್ತಿದೆ.

......ಕಾಲುಗಳು ತತ್ತರಿಸಹತ್ತಿದ್ದುವು. ರೆಕ್ಕೆಗಳಲ್ಲಿ ಬಲವಿರಲಿಲ್ಲ. ಆಗಾಗ ಮೋರೆಯನ್ನು ನೆಲಕ್ಕೆ ಹಚ್ಚಿ ಬೀಳುತ್ತಿದ್ದೆ; ದಣಿದು ನಿಲ್ಲುತ್ತಿದ್ದೆ. ಆಗ ನನಗೆ ವಿಚಾರ ಬರುತ್ತಿತ್ತು— ಎಂತಹ ಕಷ್ಟಕಾಲದಲ್ಲಿಯೂ ಪ್ರಾಣಿಗಳು ಬದುಕಲೇ ಬೇಕೆನ್ನುತ್ತಿವೆ. ಪ್ರಾಣಗಳಿಗಿಂತಲೂ ಪ್ರಿಯತಮವಾದುದು ಯಾವುದೂ ಇಲ್ಲ. ಅಂತಹ ಮಮತೆಯ ತಂದೆ ತೀರಿಕೊಂಡುದನ್ನು ಕಣ್ಣಾರೆ ಕಂಡಿದ್ದೆ; ಅದರೂ ಬದುಕಬೇಕೆಂದು ಬಯಸುತ್ತಿದ್ದೆ. ಈ ಸ್ವಾರ್ಥಪರತೆಗಾಗಿ ನನ್ನನ್ನು ನಾನೇ ಹಳಿದುಕೊಂಡೆ. ನನ್ನಂತಹ ಕೃತಘ್ನ ಯಾರೂ ಇರಲಾರರು.

ಸರೋವರ ಇನ್ನು ದೂರದಲ್ಲಿತ್ತು. ಬೇಸಿಗೆಯ ಉರಿಯಿಂದ ವಕ ವಕ ಬಾಯಿ ಬಿಡುತ್ತ ಹಾದಿಯಲ್ಲೇ ಬಿದ್ದುಕೊಂಡೆ.

ಆ ಹೊತ್ತಿಗೆ ಜಾಬಾಲಿ ಪುತ್ರರಾದ **ಹಾರೀತ** ಋಷಿಗಳು ಶಿಷ್ಯರಿಂದ ಕೂಡಿ ಪಂಪಾಸರೋವರಕ್ಕೆ ಸ್ನಾನಕ್ಕೆ ಹೊರಟಿದ್ದರು. ಅವರು ಮಾರ್ಗ ಮಧ್ಯದಲ್ಲಿ ಬಳಲುತ್ತ ಬಿದ್ದ ನನ್ನನ್ನು ಕಂಡರು. ಕೂಡಲೆ– ಈ ಗಿಳಿಮರಿಗೆ ಇನ್ನು ಪಕ್ಕ ಬಂದಿಲ್ಲ. ಮರದ ಮೇಲಿಂದಲೋ ಗಿಡುಗನ ಬಾಯೊಳಗಿಂದಲೋ ತಪ್ಪಿ ಬಿದ್ದಿರಬೇಕು. ಆದರೂ ಜೀವಂತವಿದೆ. ಕಣ್ಣು ಮುಚ್ಚಿದ್ದರೂ ಉಸಿರಾಡಿಸುತ್ತಿದೆ. ಹೂಂ;

ಬೇಗನೆ ತೆಗೆದುಕೊಳ್ಳಿರಿ ಅದನ್ನು —ಎಂದು ಒಡನಾಡಿಗಳಿಗೆ ಹೇಳಿದರು.

ಸರೋವರಕ್ಕೆ ಹೋದ ಮೇಲೆ ಮುನಿಗಳು ತಾವಾಗಿಯೇ ತುದಿ ಬೆರಳಿನಿಂದ ನೀರು ಕುಡಿಸಿದರು. ನನಗೆ ಬಾಯಾರಿಕೆ ಕಡಿಮೆಯಾಯಿತು; ಕಣ್ಣು ತೆರೆಯುವ ಮಟ್ಟಿಗೆ ಶಕ್ತಿಯೂ ಬಂದಿತು. ಮುನಿಗಳು ನನ್ನನ್ನು ಕಮಲಪತ್ರದ ನೆರಳಲ್ಲಿ ಮೆತ್ತನೆಯ ನೆಲದ ಮೇಲೆ ಮಲಗಿಸಿದರು. ಬಳಿಕ ಅವರು ಸ್ನಾನ–ಸಂಧ್ಯಾಗಳನ್ನು ತೀರಿಸಿದರು. ಕಮಂಡಲುವಿನಲ್ಲಿ ಪವಿತ್ರ ಜಲವನ್ನು ತುಂಬಿಕೊಂಡರು. ನನ್ನನ್ನು ತೆಗೆದುಕೊಂಡು ಆಶ್ರಮಕ್ಕೆ ಹೊರಟರು.

ತುಸುದೂರದಲ್ಲಿ ಬ್ರಹ್ಮಲೋಕ ಸಮಾನವಾದ ಆಶ್ರಮ ಕಾಣತೊಡಗಿತು. ಅದರಲ್ಲಿ ಫಲ-ಪುಷ್ಪಗಳಿಂದ ತುಂಬಿದ ತರು–ಲತೆಗಳಿದ್ದುವು. ಚಿಗರೆಗಳು ಅಂಜಿಕೆಯುಲ್ಲದೆ ಆಡ್ಡಾಡುತ್ತಿದ್ದುವು. ಯಜ್ಞಕ್ಕಾಗಿ ಸಮಿತ್ತುಗಳನ್ನು ಹುಡುಕುವುದಕ್ಕೆ ಮುನಿಗಳು ಶಿಷ್ಯಸಮೇತರಾಗಿ ಸಂಚರಿಸುತ್ತಿದ್ದರು. ಯಜ್ಞಕುಂಡದ ಹೊಗೆ ಆಗಸದಲ್ಲಿ ಹಬ್ಬಿ ಹರಿದಾಡುತ್ತಿತ್ತು.

ಆ ಪವಿತ್ರ ತಪೋವನದ ನಡುವೆ ಅಶೋಕ ವೃಕ್ಷವಿದೆ. ಅದರ ನೆರಳೊಳಗೆ ಹುಲಿದೊಗಲಿನ ಹಾಸಿಗೆ ಹಾಕಿತ್ತು. ಅದರ ಮೇಲೆ ಜಾಬಾಲಿ ಮುನೀಶ್ವರರು ಕುಳಿತಿದ್ದರು. ಅವರ ಅಕ್ಕಪಕ್ಕದಲ್ಲಿ ಬೇರೆ ತಪಸ್ವಿಗಳಿದ್ದರು. ಮುನೀಶ್ವರರ ಮೈ ಮುಪ್ಪಿನಿಂದ ಬೆಳ್ಳಗಾಗಿತ್ತು. ಅವರ ಬಿಳಿ ಜಡೆಗಳು ಮೈಮೇಲೆ ಹರವಿದ್ದುವು. ಹುಬ್ಬು ಕಣ್ಣುಗಳ ಮೇಲೆ ಇಳಿದಿದ್ದುವು, ಗಡ್ಡ ಮೀಸೆಗಳು ಹೊಕ್ಕುಳುವರೆಗೆ ನೇತಾಡುತ್ತಿದ್ದುವು. ಮೈ ತುಂಬ ಎದ್ದ ನರಗಳು ಕಲ್ಪವೃಕ್ಷವನ್ನು ಸುತ್ತುವರಿದ ಕಲ್ಪಲತೆಗಳಂತೆ ಕಂಗೊಳಿಸುತ್ತಿದ್ದುವು. ಆತನ ಹೆಗಲ ಮೇಲೆ ಪವಿತ್ರ ಯಜ್ಞೋಪವೀತವಿತ್ತು, ಕೈಯಲ್ಲಿ ರುದ್ರಾಕ್ಷ ಜಪಮಾಲೆಯಿತ್ತು. ಹತ್ತಿರದಲ್ಲಿಯೇ ಮಂದಾಕಿನೀ ಜಲದಿಂದ ತುಂಬಿದ ಕಮಂಡಲು ಕಂಗೊಳಿಸುತ್ತಿರುವುದು. ಅವರು ಪರ್ವತದಂತೆ ಸ್ಥಿರ, ಸಮುದ್ರ

ದಂತೆ ಗಂಭೀರ, ಶಶಿಯಂತೆ ಶಾಂತ, ಆಕಾಶದಂತೆ ನಿರ್ಮಲರಾಗಿದ್ದರು. ಆಶ್ರಮವಾಸಿಗಳಿಗೆಲ್ಲ ಅವರೇ ಗುರುಗಳು, ನಾಯಕರು.

ಆ ತೇಜೋಮೂರ್ತಿಯನ್ನು ನಾನು ಬೆರಗುಗಣ್ಣುಗಳಿಂದ ನೋಡು ತ್ತಿದ್ದೆ. ಅಷ್ಟರಲ್ಲಿ ಹಾರೀತಮುನಿ ನನ್ನನ್ನು ಅದೇ ಅಶೋಕದ ನೆರ ಳಲ್ಲಿ ಇಟ್ಟರು; ಮತ್ತು ನನ್ನ ಮೇಲೆ ಎಲ್ಲರಲ್ಲಿಯೂ ದಯೆ ಹುಟ್ಟು ವಂತೆ, ನನ್ನ ಕರುಣಕತೆಯನ್ನು ಹೇಳಿದರು; ಈ ಗಿಳಿಮರಿ ದಾರಿಯಲ್ಲಿ ಬಿದ್ದಿತ್ತು. ಬಿಸಿಲ ಬೇಗೆ ತಾಳಲಾರದೆ ವಕವಕ ಬಾಯಿಬಿಡುತ್ತಿತ್ತು. ಇಲ್ಲಿಯೇ ಕೆಲವು ಕಾಲ ಬದುಕಿರಲಿ. ಕಾಳು-ಕಡಿ, ಹಣ್ಣು-ಹಂಪಲು ತಿಂದು ಬೆಳೆಯಲಿ, ಪಕ್ಕ ಬಲಿತು ಹಾರುವ ಶಕ್ತಿ ಬರಲಿ. ಆಮೇಲೆ, ಮನಸ್ಸಿದ್ದರೆ ಇಲ್ಲಿಯೇ ಇದ್ದೀತು; ಬೇಡವಾದರೆ, ಬೇಕೆನಿಸಿದಲ್ಲಿ ಹಾರಿ ಹೋದೀತು........ ಮುಂತಾಗಿ.

ನನ್ನ ಕರುಣಕತೆಯನ್ನು ಕೇಳುತ್ತಿದ್ದಾಗ ಜಾಬಾಲಿ ಮುನೀಶ್ವರರು ಒಂದೆರಡು ಸಲ ನನ್ನನ್ನು ಶಾಂತ ದೃಷ್ಟಿಯಿಂದ ನೋಡಿದರು; ತಮ್ಮ ತ್ರಿಕಾಲ ಜ್ಞಾನದ ಬಲದಿಂದ –ತನ್ನ ಸೊಕ್ಕಿನ ಫಲವನ್ನು ತಾನು ಅನು ಭೋಗಿಸುತ್ತಿದ್ದಾನೆ– ಎಂದು ಮೆತ್ತಗೆ ಮಾತನಾಡಿದರು.

ಅದನ್ನು ಕೇಳುತ್ತಲೇ ಉಳಿದವರಿಗೆಲ್ಲ ಆಶ್ಚರ್ಯವಾಯಿತು. ಅವರು ಕುತೂಹಲದಿಂದ ಕೈಮುಗಿದು ಕೇಳಿದರು– ಭಗವನ್, ಇದು ಮಾಡಿದ ಪೈಸೊಕ್ಕು ಯಾವುದು ? ಪೂರ್ವ ಜನ್ಮದಲ್ಲಿ ಈತ ಯಾರು ? ಹಕ್ಕಿಯಾಗಿ ಹುಟ್ಟಲು ಕಾರಣವೇನು ? ದಯವಿಟ್ಟು ತಿಳಿಸಬೇಕು.

ಈತನ ಕತೆ ಕುತೂಹಲಕಾರಿಯಾಗಿದೆ; ಹಾಗೆಯೇ ದೊಡ್ಡದೂ ಇದೆ. ಈಗ ಸಂಜೆಯಾಗುತ್ತಲಿದೆ. ಪೂಜಾದಿ ನಿತ್ಯಕರ್ಮಗಳನ್ನು ನೆರವೇರಿಸಿರಿ. ರಾತ್ರಿ ಭೋಜನವಾದ ಮೇಲೆ ಎಲ್ಲವನ್ನು ಹೇಳುವೆ. ಅಲ್ಲಿಯ ವರೆಗೆ ಇದೂ ಉಂಡು ತಿಂದು ಗಟ್ಟಿಯಾಗಲಿ. ನಾನು ಕತೆ ಯನ್ನು ಹೇಳುತ್ತಿದ್ದಂತೆಯೇ ಇದಕ್ಕೆ ತನ್ನ ಪೂರ್ವಜನ್ಮದಲ್ಲಿ ಮಾಡಿ ದುದು ಸ್ವಪ್ನ ಸಂಗತಿಯಂತೆ ನೆನಪಾದೀತು– ಎನ್ನುತ್ತ ಮುನೀಶ್ವರರು ಎದ್ದರು.

—

# ೩ ವೈಶಂಪಾಯನ ಪೂರ್ವಜನ್ಮದಲ್ಲಿ ಯಾರು ?

ಹಗಲು ಕರಗಿತು. ಆಶ್ರಮದಲ್ಲಿ ಯಜ್ಞ – ಯಾಗಗಳು ಆಹುತಿ, ನೈವೇದ್ಯಗಳು ನಡೆದುವು. ಊಟ – ಉಪಚಾರಗಳು ಮುಗಿದುವು. ಇಷ್ಟಾಗುವುದರೊಳಗೆ ಮೊದಲನೆಯ ಪ್ರಹರ ಮುಗಿದಿರಬಹುದು.

ಚಂದ್ರ ಮೇಲೆದ್ದು ಬಂದ. ಬೆಳುದಿಂಗಳು ನೆಲದ ಮೇಲೆ ಹಾಲ್ಗಡಲನ್ನು ಹರಿಸಿತು. ಜಾಬಾಲಿ ಋಷಿಗಳು ಬೆತ್ತದ ಪೀಠದ ಮೇಲೆ ಕುಳಿತರು. ಉಳಿದ ತಪಸ್ವಿಗಳೂ ತಮ್ಮ ತಮ್ಮ ಆಸನಗಳನ್ನು ಅಲಂಕರಿಸಿದರು. ಹಾರೀತ ಮುನಿಗಳು ತಾವೇ ಕೈಮುಟ್ಟಿ ನನ್ನ ಹೊಟ್ಟೆ ತುಂಬಿಸಿದರು; ಹಾಗೆಯೇ ನನ್ನನ್ನು ತಂದು ಮುನೀಶ್ವರರ ಇದಿರಿಗೆ ಇಳಿಸಿದರು.

ಜಾಬಾಲಿಗಳು ಸರ್ವರ ಸಂತೋಷಕ್ಕಾಗಿ ವೈಶಂಪಾಯನನ ಕುತೂಹಲಕಾರಿ ಕತೆಯನ್ನು ಹೇಳತೊಡಗಿದರು....

ಅವಂತೀ ದೇಶದಲ್ಲಿ **ಸಿಪ್ರಾ** ನದೀ ತೀರದ ಮೇಲೆ **ಉಜ್ಜಯಿನೀ** ನಗರವಿದೆ. ಅದು ಇಂದ್ರನ ಅಮರಾವತಿಯಂತೆ ಸಕಲ–ಸಂಪತ್ತುಗಳ ತವರ ಮನೆಯಾಗಿತ್ತು. ಅಲ್ಲಿಯ ಚಿತ್ರ ಶಾಲೆಯಲ್ಲಿ ದೇವ, ಗಂಧರ್ವ, ಸಿದ್ಧ, ವಿದ್ಯಾಧರ, ಯಕ್ಷರ ಚಿತ್ರಗಳಿವೆ. ಅವರೆಲ್ಲರೂ ಉಜ್ಜಯಿನೀ ನಗರದ ಉತ್ಸವವನ್ನು ನೋಡಲು ಭೂಲೋಕಕ್ಕೆ ಬಂದಿರುವರೋ ಎಂದು ತೋರುತ್ತಿದೆ. ತ್ರಿಭುವನ ಸ್ವಾಮಿಯಾದ ಮಹಾದೇವನೇ ಅಲ್ಲಿ ಸ್ವಯಂ ಮಹಾಕಾಲೇಶ್ವರನಾಗಿ ನೆಲೆಸಿದ್ದಾನೆ. ಆ ಭವ್ಯಮಂದಿರದ ಸ್ವರ್ಣ ಕಲಶಗಳು ದೂರದಿಂದಲೇ ದೇವದರ್ಶನ ಮಾಡಿಸುತ್ತಿವೆ. ಅವುಗಳ ಮೇಲೆ ಬಿಳಿಯ ಬಾವುಟಗಳು ಮುಗಿಲೆತ್ತರದಲ್ಲಿ ಹಾರಾಡುತ್ತಿವೆ. ಅಲ್ಲಿಯ ಜನರು ಸದಾಚಾರಿಗಳು, ಸುವಿಚಾರಿಗಳು, ಸಕಲ ಸಂಪತ್ ಸಮೃದ್ಧಿ ಉಳ್ಳವರು; ಕಲಾವಿಲಾಸಿಗಳು, ಶಾಸ್ತ್ರಪ್ರವೀಣರು, ದಯಾವಂತರು, ದಾನಶೀಲರು. ಅವರು ವೀರರಾಗಿದ್ದರೂ ವಿನೀತರು, ಸವಿಮಾತಾಡುತ್ತಿದ್ದರೂ ಸತ್ಯವಂತರು, ಸುಂದರರಾದರೂ ಸತೀವ್ರತವನ್ನು ಆಚರಿಸುವವರು.

ಇಂತಹ ಮಹೋನ್ನತ ನಗರವನ್ನು **ತಾರಾಪೀಡ** ಎಂಬ ಅರಸು ಆಳುತ್ತಿದ್ದ. ಅವನು ಬಾಹು ಬಲದಿಂದ ತ್ರಿಭುವನಗಳನ್ನು ಗೆದ್ದು ಕೊಂಡಿದ್ದ. ಈತನ ಬಿಳಿಯ ಕೀರ್ತಿ ದಶದಿಕ್ಕುಗಳನ್ನು ಬೆಳಗುತ್ತಿತ್ತು; ಹಗೆಗಳ ಮೋರೆಗೆ ಮಾತ್ರ ಕಪ್ಪನ್ನು ತೊಡೆಯುತ್ತಿತ್ತು. ಈತನ ಅಷ್ಟೈಶ್ವರ್ಯವನ್ನು ನೋಡಿ ಇಂದ್ರನಿಗೂ ಹೊಟ್ಟೆಯುರಿ ಹುಟ್ಟುತ್ತಿದ್ದಿತೆಂತೆ.

ಇಂತು ಧರ್ಮಾತ್ಮನಾದ ದೊರೆಗೆ **ಶುಕನಾಸ** ಎಂಬ ಮಂತ್ರಿಯಿದ್ದ. ಇಂದ್ರನಿಗೆ ಬೃಹಸ್ಪತಿ, ವೃಷಪರ್ವನಿಗೆ ಶುಕ್ರಾಚಾರ್ಯ, ದಶರಥನಿಗೆ ವಸಿಷ್ಠರು, ಯುಧಿಷ್ಠಿರನಿಗೆ ಧೌಮ್ಯರು........ ಹೇಗೋ ಹಾಗೆಯೇ ತಾರಾಪೀಡ–ಶುಕನಾಸರ ಜೊತೆ ಕೂಡಿತ್ತು. ರಾಜನೀತಿಯಲ್ಲಿ ಶುಕನಾಸ ಎಲ್ಲ ಪ್ರಮೇಯ ಪರಿಹಾರಗಳನ್ನು ತಿಳಿದಿದ್ದ; ರಾಜ್ಯಪಾಲನೆಯ ಕಾರ್ಯವನ್ನು ಸರಾಗವಾಗಿ ಸಾಗಿಸಿದ್ದ.

ತಾರಾಪೀಡನಿಗೆ ಇದಿರಾಗಿ ಬಾಳುವ ವೈರಿಗಳು ಯಾರೂ ಇರಲಿಲ್ಲ. ಅವನು ರಾಜ್ಯ ಭಾರವನ್ನೆಲ್ಲ ಮಂತ್ರಿಗೆ ಒಪ್ಪಿಸಿ ತಾನು ಶಾಸ್ತ್ರ ವಿನೋದಗಳಲ್ಲಿ ಕಾಲವನ್ನು ಕಳೆಯುತ್ತಿದ್ದ. ಆತನ ರಾಣಿವಾಸದಲ್ಲಿ ಅನೇಕ ಜನ ರಾಣಿಯರಿದ್ದರು. ಅವರೊಡನೆ ವಿಷಯ ಸುಖವಿಲಾಸದಲ್ಲಿ ಬಹಳ ವೇಳೆ ಕಳೆಯುತ್ತಿದ್ದ. ಬೇಸರವೆನಿಸಿದಾಗ ಕಲಾ ಶಾಲೆಯಲ್ಲಿ ನೃತ್ಯ ಸಂಗೀತ ಪ್ರಸಂಗಗಳಲ್ಲಿ ಮನಸ್ಸನ್ನು ರಮಿಸುತ್ತಿದ್ದ. ಆತನ ಸುಖಜೀವನಕ್ಕೆ ಯಾವ ಕೊರತೆಯೂ ಇರಲಿಲ್ಲ. ಆದರೆ—?

ಅರಸನಿಗೆ ಬಹುಕಾಲದ ವರೆಗೆ ಸಂತಾನವೇ ಆಗಲಿಲ್ಲ. ಅದೊಂದು ಚಿಂತೆ ಹುಳುವಿನಂತೆ ಅವನ ಎದೆಯನ್ನು ಕೊರೆಯುತ್ತಿತ್ತು. ಅದೇ ಚಿಂತೆಯಲ್ಲಿ ಒಮ್ಮೆ ಪಟ್ಟದ ರಾಣಿ ವಿಲಾಸವತಿಯ ಅಂತಃಪುರಕ್ಕೆ ಆಗಮಿಸಿದ. ಅರಸಿ ಅಳುತ್ತ ಮಂಚದ ಮೇಲೆ ಮಲಗಿದ್ದಳು. ಪರಿಚಾರಿಕೆಯರು ಆಕೆಗೆ ಸಮಾಧಾನ ಹೇಳುತ್ತಿದ್ದರು. ಆದರೇನು? ಸವಿಮಾತಿನಿಂದ ಸಂತಾನದ ಬಯಕೆ ಈಡೇರಬಲ್ಲುದೆ?

ಅರಸರನ್ನು ಕಾಣುತ್ತಲೇ ವಿಲಾಸವತಿ ಗೌರವದಿಂದ ಎದ್ದು

ಮುಂದೆ ಬಂದಳು. ದೊರೆ ಅವಳ ಕೈಹಿಡಿದು ಮಂಚದ ಮೇಲೆ ಕುಳ್ಳಿರಿಸಿ ದುಗುಡದ ಕಾರಣವನ್ನು ಕೇಳಿದ— ವಿಲಾಸವತಿ, ಅಳುವೆಯೇಕೆ ? ದಾಸ-ದಾಸಿಯರಲ್ಲಿ ಯಾರಾದರೂ ನಿನ್ನನ್ನು ನೋಯಿಸಿದರೇ ? ನನ್ನಿಂದ ಏನಾದರೂ ತಪ್ಪಾಗಿದೆಯೇ ?

ರಾಣಿ ಉತ್ತರ ಕೊಡಲಿಲ್ಲ. ಕಣ್ಣೀರು ಕರೆಯುತ್ತ ಹಾಗೆಯೇ ನಿಂತಳು. ಆಗ ಮಕರಿಕೆ ಎಂಬ ದಾಸಿ ಮುಂದುವರಿದು ಮಾತನಾಡಿದಳು— ಜೀಯಾ, ಮಕ್ಕಳಿಲ್ಲೆಂಬ ಮರಗು ಅವರನ್ನು ಕೊರಗಿಸುತ್ತದೆ. ನಿತ್ಯವೂ ನಮ್ಮ ಒತ್ತಾಯಕ್ಕಾಗಿ ಊಟ – ಉಡಿಗೆ ಮಾಡುತ್ತಿದ್ದರು. ಹೊರತಾಗಿ, ಅವರಿಗೆ ಯಾವುದರಲ್ಲಿಯೂ ಆಸ್ಥೆ ಇಲ್ಲ. ಇಂದು ಶಿವರಾತ್ರಿಯೆಂದು ಮಹಾಕಾಲೇಶ್ವರ ದೇವಸ್ಥಾನಕ್ಕೆ ಹೋಗಿದ್ದೆವು. ಅಲ್ಲಿ ಮಹಾಭಾರತ ಪುರಾಣ ನಡೆದಿತ್ತು. ಅದರಲ್ಲಿ ಮಕ್ಕಳಿಲ್ಲದವರಿಗೆ ಮೋಕ್ಷವಿಲ್ಲ, ಎಂದು ಹೇಳಿದರು. ಆಗಿನಿಂದಲೂ ಒಂದೇ ಸವನೆ ಕಣ್ಣೀರು ಸುರಿಸುತ್ತಿದ್ದಾರೆ. ಸ್ನಾನವಿಲ್ಲ, ಊಟವಿಲ್ಲ; ಆಭರಣಗಳನ್ನು ಕೂಡ ಬಿಸುಟ ಬಿಟ್ಟಿದ್ದಾರೆ........ !

ಅರಸನಿಗೂ ಅದೇ ಕೊರಗು. ಆದರೂ ಪತ್ನಿಯನ್ನು ಸಂತೈಸಿದ–

ವಿಲಾಸವತೀ, ಮಕ್ಕಳಾಗುವುದು ಮನುಷ್ಯರ ಕೈಯೊಳಗಿನದಲ್ಲ; ದೈವಾಧೀನದ ಮಾತು. ನಾವು ಪೂರ್ವಜನ್ಮದಲ್ಲಿ ಪುಣ್ಯ ಮಾಡಿಲ್ಲ; ಮಕ್ಕಳನ್ನು ಪಡೆದು ಬಂದಿಲ್ಲ. ಸುಮ್ಮನೆ ಅತ್ತರೆ ಆಗುವುದೇನು ? ಸಾಧು–ಸತ್ಪುರುಷರ ಸೇವೆ ಮಾಡು. ವ್ರತ–ನಿಯಮಗಳಿಂದ ದೇವರನ್ನು ಆರಾಧಿಸು. ಈ ಸೇವೆ–ಆರಾಧನೆಗಳು ಎಂದೂ ವ್ಯರ್ಥವಾಗುವುದಿಲ್ಲ. ಪುರಾಣ – ಪುಣ್ಯ ಕತೆಗಳಲ್ಲಿ ಇಂತಹ ಉದಾಹರಣಗಳು ಬೇಕಾದಷ್ಟಿವೆ. ನಿನ್ನ ಚಿಂತೆ ನನಗಿಲ್ಲವೇ ? ಮಕ್ಕಳಿಲ್ಲದ ನನಗೆ ಈ ಐಶ್ವರ್ಯವೆಲ್ಲ ಹಾಳು ಹಾಳು ಸುರಿಯುತ್ತಿದೆ. ದೇವರನ್ನು ಮೊರೆ ಹೋಗೋಣ. ಅಳಬೇಡ ಏಳು........ !

ಪತಿಯ ಹಿತವಚನಗಳಿಂದ ವಿಲಾಸವತಿಗೆ ತುಸು ಸಮಾಧಾನವಾಯಿತು. ಅಂದಿನಿಂದ ಸಾಧು – ಸತ್ಪುರುಷರ ಸೇವೆ, ವ್ರತ –

ನಿಯಮಗಳಿಂದ ದೇವಾರಾಧನೆ, ಬಡವರಿಗೆ ಕೈಬಿಚ್ಚಿ ದಾನ ಕೊಡುವುದು, ದೀನ - ದರಿದ್ರರಿಗೆ ಅನ್ನ - ವಸ್ತ್ರ ಸಂತರ್ಪಣೆ ಮುಂತಾದ ಸತ್ಕಾರ್ಯಗಳಲ್ಲಿ ವಿಲಾಸವತಿಯ ವೇಳೆ ಕಳೆಯಹತ್ತಿತು.

ಹೀಗೆಯೇ ಕೆಲವು ಹಗಲಿರುಳು ಕಳೆದುವು. ಒಂದಿರುಳು ಬೆಳಗಾಗುವ ಪ್ರಹರದಲ್ಲಿ ಅರಸು ಒಂದು ಸುಖ ಸ್ವಪ್ನವನ್ನು ಕಂಡ. ಅದರಲ್ಲಿ ವಿಲಾಸದೇವಿಯ ಮುಖದಲ್ಲಿ ಪೂರ್ಣಚಂದ್ರನ ಪ್ರವೇಶವಾದಂತೆ ತೋರಿತು. ಆತ ಫಕ್ಕನೆ ಎಚ್ಚತ್ತ. ಕೂಡಲೆ ಶುಕನಾಸ ಮಂತ್ರಿಯನ್ನು ಕರೆಸಿ ಆತನಿಗೆ ಈ ಸ್ವಪ್ನ ವಾರ್ತೆಯನ್ನು ತಿಳಿಸಿದ.

" ಮಹಾರಾಜರೇ, ಮುಂದಾಗುವ ಪುತ್ರಲಾಭದ ಮುನ್ಸೂಚನೆಯಿದು. ನಮ್ಮೆಲ್ಲರ ಬಹುಕಾಲದ ಮನೋರಥ ಫಲಕೊಡುವುದರಲ್ಲಿ ಸಂಶಯವಿಲ್ಲ " ಎಂದು ಹೇಳುತ್ತ "ಪ್ರಭುಗಳೇ, ಸೌಮ್ಯನಾದ ಬ್ರಾಹ್ಮಣನೊಬ್ಬ ನನ್ನ ಪ್ರಿಯ ಪತ್ನಿ ಮನೋರಮೆಯ ತೊಡೆಯ ಮೇಲೆ ಅರಳಿದ ಅರವಿಂದವನ್ನು ಇಟ್ಟು ಹೋದಂತೆ ಸ್ವಪ್ನವನ್ನು ಕಂಡೆ. ರಾತ್ರಿ ಕೊನೆಯ ಗಳಿಗೆಯ ಸ್ವಪ್ನ ಫಲ ಎಂದೂ ಸುಳ್ಳಾಗುವುದಿಲ್ಲ. ತಮಗೆ ಮಾಂಧಾತನಂತೆ ಮಹಾಮಹಿಮನಾದ ಪುತ್ರ ಹುಟ್ಟುತ್ತಾನೆ. ಆತನ ಬಿಳಿಯ ಬಳ್ಳಿ ದಾಂಗುಡಿಯಿಟ್ಟು ಬೆಳೆಯುತ್ತಿದೆ. ಅವರೆಲ್ಲ ಚಕ್ರವರ್ತಿಗಳಾಗಿಯೇ ಬೆಳಗುತ್ತಾರೆ" ಮುಂತಾಗಿ ಮಾತನ್ನು ಮುಗಿಸಿದ.

ದೊರೆ ಅತ್ಯಾನಂದದಿಂದ ಮಂತ್ರಿಸಹಿತನಾಗಿ ವಿಲಾಸವತೀ ರಾಣಿಯ ಅಂತಃಪುರಕ್ಕೆ ಆಗಲೇ ಹೋದ; ಆಕೆಗೆ ಈ ಆನಂದವಾರ್ತೆಯನ್ನು ತಿಳಿಸಿದ. ರಾಣಿಯ ಆನಂದಕ್ಕೆ ನೆಲಮುಗಿಲು ಸಾಲದಾಗಿರಬೇಕು.

ಕೆಲವೇ ದಿನಗಳು ಕಳೆದುವು. ದೇವರ ದಯೆಯಿಂದ ವಿಲಾಸವತೀ ದೇವಿ ಗರ್ಭಧಾರಣ ಮಾಡಿದಳು. ದಿನ ದಿನಕ್ಕೆ ಬಯಕೆಯ ಲಕ್ಷಣ ಬೆಳೆಯತೊಡಗಿದುವು. ಆಹಾರ ಸೇರದಂತಾಯಿತು. ಬಸಿರು ಬೆಳೆದಂತೆ ನಡಿಗೆ ಮಂದವಾಯಿತು. ಆಗಾಗ ಆಕಳಿಕೆ ಬರುತ್ತಿದ್ದುವು.

ಆಲಸ್ಯ ಆರಂಭವಾಯಿತು. ಕುಚಾಗ್ರಗಳು ಕಪ್ಪಾದುವು. ಮೈ ಮೋರೆಗಳೆಲ್ಲ ಕೇದಗಿ ಬಣ್ಣಕ್ಕೆ ತಿರುಗಿದುವು.

ರಾಣಿವಾಸದ ದಾಸಿಯರಲ್ಲಿ ಕುಲವರ್ಧನೆ ವಯಸ್ಸಿನಿಂದ ಹಿರಿಯಳು. ರಾಣಿಯ ಮೆಚ್ಚುಗೆಯ ದಾಸಿಯಾಗಿದ್ದಳು. ಒಂದು ದಿನ ಅರಸು ಸಭಾಭವನದ ಒಳಮುಗ್ಗಲು ಕುಳಿತಿದ್ದ. ಸುತ್ತುಮುತ್ತಲೂ ಸುಗಂಧ ತೈಲದ ದೀವಿಗೆಗಳು ಬೆಳಗುತ್ತಿದ್ದುವು. ಅರಸರ ಪಕ್ಕದಲ್ಲಿಯೇ ಬಿಳಿಬಟ್ಟೆಗಳನ್ನು ಧರಿಸಿದ ಶುಕನಾಸ ಮಂತ್ರಿ ಕುಳಿತಿದ್ದ. ಉಳಿದ ಸಾಮಂತರಾಜರು ತುಸು ದೂರದಲ್ಲಿ ಇದ್ದರು. ಆಗ ಕುಲವರ್ಧನೆ ದೊರೆಯ ಹತ್ತಿರ ಹೋದಳು; ವಿಲಾಸವತೀದೇವಿ ಗರ್ಭಿಣಿ ಇರುವ ಸುವಾರ್ತೆಯನ್ನು ಆತನ ಕಿವಿಯಲ್ಲಿ ಹೇಳಿದಳು.

ಅರಸನ ಕಿವಿಯಲ್ಲಿ ಅಮೃತವನ್ನು ಸುರಿದಂತಾಯಿತು. ಆತನ ಆನಂದದ ಮುಖಮುದ್ರೆಯನ್ನು ನೋಡಿ ಶುಕನಾಸ ಕೇಳಿದ—ದೇವಾ, ಸ್ವಪ್ನವೃತ್ತಾಂತ ಸತ್ಯವಾಗಿರಬೇಕಲ್ಲವೇ ?

ನಾನು ಅಷ್ಟು ಭಾಗ್ಯವಂತನಾಗಿದ್ದೇನೆಯೇ? —ಆನಂದದಲ್ಲಿಯೇ ಮೇಲಕ್ಕೆದ್ದ ಅರಸು. ಕುಲವರ್ಧನೆಗೆ ಬೆಲೆಯುಳ್ಳ ಭೂಷಣಗಳನ್ನು ಮೆಚ್ಚುಕೊಟ್ಟ; ಸಾಮಂತರಿಂದ ಬೀಳ್ಕೊಂಡ; ಶುಕನಾಸರೊಡನೆ ವಿಲಾಸವತೀರಾಣಿಯ ಅಂತಃಪುರಕ್ಕೆ ಬಿಜಯಗೈದ.

ವಿಲಾಸವತಿ ಶಯನಾಗಾರದಲ್ಲಿ ಎತ್ತರದ ಮಂಚದ ಮೇಲೆ ಮಲಗಿದ್ದಳು. ಮಂಚದ ಮೇಲೆ ಗೋರೋಚನದಿಂದ ಚಿತ್ರಿಸಿದ ಬಿಳಿ ಬಟ್ಟೆಯ ಮೇಲ್ಕಟ್ಟು ಮೆರೆಯುತ್ತಿತ್ತು. ಸುತ್ತಲೂ ಸುಗಂಧ ತೈಲದ ದೀವಿಗೆ ಬೆಳಗುತ್ತಿದ್ದುವು. ಗೋಡೆಗಳೆಲ್ಲ ಸಾರಣೆ - ಕಾರಣೆಗಳಿಂದ ಚಿತ್ರ–ವಿಚಿತ್ರವಾಗಿದ್ದುವು. ಎತ್ತ ನೋಡಿದತ್ತ ಮಂಗಲ ಚಿಹ್ನಗಳೇ ಮೆರೆಯುತ್ತಿದ್ದುವು.

ದಾಸಿಯರು ಕೈಕೊಟ್ಟು ರಾಣಿಯನ್ನು ಎಬ್ಬಿಸಿದರು. ಆಕೆ ಮೆಲ್ಲಗೆ ಎದ್ದು ಪತಿದೇವನನ್ನು ಸ್ವಾಗತಿಸಿದಳು. ಅರಸು ಅದೇ ಮಂಚಕದ ಮೇಲೆ ಕುಳಿತ. ಶುಕನಾಸ ಪಕ್ಕದ ಆಸನದಲ್ಲಿ ಕುಳಿತ.

"ದೇವೀ, ಕುಲವರ್ಧನೆ ಹೇಳಿದ ಸಮಾಚಾರ ಸತ್ಯವೇ? ಶುಕ ನಾಸನಿಗೆ ಅದರ ಉತ್ತರಬೇಕಾಗಿದೆ. ಹೇಳು." ಅರಸು ಮುಗುಳು ನಗುತ್ತ ಕೇಳಿದ.

ರಾಣಿ ಸಮ್ಮತಿಯನ್ನು ಸೂಚಿಸುವ ಭಂಗಿಯಲ್ಲಿ ನಾಚಿ ತಲೆಬಾಗಿಸಿ ನಿಂತಳು; "ಅದೇನೋ ನನಗೆ ಗೊತ್ತಿಲ್ಲ" ಎಂದು ಸಿಟ್ಟಾದವಳಂತೆ ನಟಿಸಿದಳು. ಅದರಿಂದ ಅರಸನೂ ಮಂತ್ರಿಯೂ ಮತ್ತಿಷ್ಟು ಆನಂದ ಪಟ್ಟರು. ಶುಕನಾಸ ರಾಣಿಯ ಮುಖಲಕ್ಷಣದಿಂದ, ಮುಂದಾಗುವ ಪುತ್ರ ರತ್ನದ ವೈಶಿಷ್ಟ್ಯವನ್ನು ಬಣ್ಣಿಸಿದ.

ಒಂಬತ್ತು ತಿಂಗಳು ಕಳೆದುವು. ಮಹಾರಾಣಿ ಮಂಗಲ ಮುಹೂರ್ತದಲ್ಲಿ ಪುತ್ರ ರತ್ನವನ್ನು ಪಡೆದಳು. ಅರಮನೆಯ ಒಳಗೂ ಹೊರಗೂ ದೀಪ ಮಾಲೆಗಳು ಝಗ ಝಗಿಸತೊಡಗಿದುವು. ಮಂಗಳವಾದ್ಯ ಮೊಳಗಿದುವು. ನಗರದಲ್ಲೆಲ್ಲ ಆನಂದವೇ ಆನಂದ! ನಾಗರಿಕರು ಅರಸನನ್ನು ಅಭಿನಂದಿಸಲು ತಂಡ ತಂಡವಾಗಿ ರಾಜ ಪ್ರಸಾದದತ್ತ ಸಾಗಿದರು. ಪುರೋಹಿತರು ಸ್ವಸ್ತಿ ಮಂತ್ರಗಳ ಘನ ಪಾಠ ಹೇಳಿದರು. ದೀನ – ದರಿದ್ರರಿಗೆ ಬಿಚ್ಚುಗೈಯಿಂದ ವಸ್ತ್ರ – ಭೂಷಣಗಳ ದಾನವಾಯಿತು. ರಾಜ್ಯದಾದ್ಯಂತ ಆನಂದವೇ ಆನಂದ, ಉತ್ಸವವೇ ಉತ್ಸವ.

ತಾರಾಪೀಡನಿಗೆ ಮಗನನ್ನು ನೋಡಬೇಕೆಂಬ ಆತುರ ಅತ್ಯಧಿಕ ವಾಗಿತ್ತು. ಶುಕನಾಸ ಮಂತ್ರಿಯೊಡನೆ ಸೂತಿಕಾಗೃಹಕ್ಕೆ ತೆರಳಿದ. ಅಲ್ಲಿ ಸುವಾಸಿನಿಯರು ಕಲ್ಯಾಣಕಾರಿ ದೃಶ್ಯಗಳೆಲ್ಲ ಎದ್ದು ಕಾಣುವಂತೆ ಮಾಡಿದ್ದರು. ಅರಸು, ಪದ್ಧತಿಯಂತೆ ಅಗ್ನಿ–ಜಲಗಳನ್ನು ಮುಟ್ಟಿ ಸೂತಿಕಾಗೃಹವನ್ನು ಹೊಕ್ಕ.

ಹೆರಿಗೆಯ ಆಯಾಸದಿಂದ ದುರ್ಬಲಳಾದ ವಿಲಾಸವತೀ ದೇವಿಯ ಮಗ್ಗುಲಲ್ಲಿ ಮಗು ಮಲಗಿತ್ತು. ಉದಯಿಸುವ ಬಾಲರವಿಯೋ ಕಲ್ಪ ವೃಕ್ಷದ ಕೋಮಲ ಪಲ್ಲವವೋ ದೇವಾಂಗನೆಯರ ಕೈಯಿಂದ ಭೂ- ಲೋಕಕ್ಕೆ ಬಿದ್ದ ದೇವೇಂದ್ರನ ಕುಮಾರನೋ ಎನುವಂತೆ ಸಕಲ

ಸುಲಕ್ಷಣಗಳಿಂದ ಕೂಡಿದ ಮುದ್ದುಮಗುವನ್ನು ಅರಸು ನೋಡಿದ. ಅವನ ಆನಂದಕ್ಕೆ ಅಳತೆಗೋಲೇ ಇರಲಿಲ್ಲ.

ಶುಕನಾಸ ಮಂತ್ರಿ ಕೂಸನ್ನು ನೆಟ್ಟಗೆ ನೋಡಿ– ಪ್ರಭುಗಳೇ ಇತ್ತ ನೋಡಿರಿ. ಇನ್ನೂ ಈತ ಎಳಗೂಸು. ಸಾಮುದ್ರಿಕ ಲಕ್ಷಣಗಳು ಸರಿಯಾಗಿ ಕಾಣುವುದಿಲ್ಲ. ಆದರೂ ಚಕ್ರವರ್ತಿ ಲಕ್ಷಣಗಳು ನಿಚ್ಚಳವಾಗಿ ತೋರುತ್ತಿವೆ– ಎಂದು ಹೇಳಿದ.

ಅಷ್ಟರಲ್ಲಿ **ಮಂಗಲ** ಎಂಬ ಸೇವಕ ಓಡುತ್ತ ಬಂದು ಅರಸನನ್ನು ಕಂಡ. "ದೊರೆಗಳೇ, ರೇಣುಕಾದೇವಿ ಪರಶುರಾಮನನ್ನು ಹೆತ್ತಂತೆ, ಶುಕನಾಸ ಮಂತ್ರಿಗಳವರ **ಮನೋರಮಾ ಮಹಾದೇವಿ** ಪುತ್ರರತ್ನವನ್ನು ಪಡೆದರು"– ಎಂದು ಹೇಳಿದ.

ಅರಸು – ಮಂತ್ರಿಗಳ ಸಂತೋಷಕ್ಕೆ ಸೀಮೆಯೇ ಉಳಿಯಲಿಲ್ಲ. ಸುದ್ದಿಯನ್ನು ತಂದ ಸೇವಕನಿಗೆ ಶುಕನಾಸನ ಮೈಮೇಲಿನ ಭರಜರಿ ಶಾಲನ್ನೇ ಮೆಚ್ಚುಗೊಟ್ಟ ಸಂಕಟದ ಹಿಂದೆಯೇ ಸಂಕಟ ಬರುವಂತೆ, ಸುಖದ ಹಿಂದೆಯೇ ಸುಖವೂ ಬರಲೇಬೇಕು— ಎಂದು ಹಿಗ್ಗುತ್ತ ಅವರಿಬ್ಬರೂ ಮಂತ್ರಿಯ ಮನೆಯ ಕಡೆಗೆ ನಡೆದರು; ಮಗುವನ್ನು ನೋಡಿ ಆನಂದಪಟ್ಟರು.

ಆರನೆಯ ದಿನ ಅರಮನೆಯಲ್ಲಿ ಅನ್ನಸಂತರ್ಪಣೆ, ಆನಂದೋತ್ಸವಗಳು, ಭೂದಾನ – ಗೋದಾನಗಳು ಎಡೆಬಿಡದೆ ನಡೆದುವು. ರಾಜಕುಮಾರನಿಗೆ, ಸ್ವಪ್ನ ಚಂದ್ರದರ್ಶನ ಕಾರಣದಿಂದ, **ಚಂದ್ರಾಪೀಡ** ಎಂದು ಹೆಸರಿಟ್ಟರು. ಮಂತ್ರಿಯ ಮಗನಿಗೆ **ವೈಶಂಪಾಯನ** ಎಂದು ಹೆಸರಾಯಿತು.

—

## ೪. ಮುದ್ದು ಮಕ್ಕಳು

ಮಕ್ಕಳು ಮುದ್ದಾಗಿ ಬೆಳೆದು ತಾಯ್ತಂದೆಗಳನ್ನು ಸಂತಸಕಡಲಲ್ಲಿ ಈಸಾಡಿಸಿದರು. ಅವರು ಬೆಳೆಬೆಳೆದಂತೆ ಚೌಲಕರ್ಮ, ಉಪನಯನ

ಸಂಸ್ಕಾರಗಳು ಮುಗಿದುವು. ಅವರ ವಿದ್ಯಾಭ್ಯಾಸಕ್ಕಾಗಿ ಉಜ್ಜಯಿನಿಯಿಂದ ಅರ್ಧ ಹರದಾರಿಯ ಮೇಲೆ ಭವ್ಯ ವಿದ್ಯಾಭವನವನ್ನು ರಚಿಸಲಾಯಿತು. ಅವರ ಆಟ-ಪಾಟಗಳಿಗೆ, ಕುದುರೆ ಏರಾಟ, ಶಸ್ತ್ರಾಸ್ತ್ರಗಳನ್ನು ಕಲಿಯುವುದಕ್ಕೆ, ಗರಡೀ ಸಾಧಕ ಮಾಡುವುದಕ್ಕೆ ಸರ್ವ ಸಾಧನ-ಸಲಕರಣೆಗಳ ಸಿದ್ಧತೆಯಾಯಿತು. ವಿದ್ಯಾಭ್ಯಾಸ ಮಾಡಿಸುವುದಕ್ಕೆ ದೂರ ದೂರದಿಂದ ಪಂಡಿತರು ಆಗಮಿಸಿದರು. ಒಟ್ಟಾರೆ, ಮಕ್ಕಳು ಮಹಾಪುರುಷರಾಗುವುದಕ್ಕೆ ತಕ್ಕ ಎಲ್ಲ ಏರ್ಪಾಟಗಳೂ ಆಗಿದ್ದುವು.

ಚಂದ್ರಾಪೀಡ-ವೈಶಂಪಾಯನರು ಸಮವಯಸ್ಕರು. ಬುದ್ಧಿಯ ಚುರುಕುತನದಲ್ಲಿಯೂ ಸಮಾನರೇ. ಅದರಿಂದ, ಜೀವದ ಜೊತೆಗಾರರಾಗಿ ಎಲ್ಲ ವಿದ್ಯೆಗಳಲ್ಲಿಯೂ ಪರಿಣತಿಯನ್ನು ಪಡೆಯುತ್ತಿದ್ದರು. ಅವರ ಬುದ್ಧಿಬಲವನ್ನು ಮೆಚ್ಚಿದ ಗುರುಗಳು ಅತಿ ಕಠಿನ ವಿಷಯಗಳನ್ನು ಕೂಡ ಅವರಿಗೆ ಲೀಲಾಜಾಲವಾಗಿ ಕಲಿಸುತ್ತಿದ್ದರು. ಪರಿಣಾಮವಾಗಿ, ಅಲ್ಪಾವಧಿಯಲ್ಲಿಯೇ ಅವರು ಸಕಲ ಕಲೆಗಳಲ್ಲಿ ಪ್ರವೀಣರಾದರು. ವ್ಯಾಕರಣ, ತರ್ಕ, ಮೀಮಾಂಸಾ, ನ್ಯಾಯ, ರಾಜನೀತಿಗಳಲ್ಲಿ ನಿಪುಣತೆ ಪಡೆದರು. ಮಲ್ಲಯುದ್ಧ, ಧನುರ್ವಿದ್ಯೆ, ಖಡ್ಗ-ಢಾಲುಗಳ ಉಪಯೋಗ ಮುಂತಾದುವುಗಳಲ್ಲಿ ಮೇಲ್ಮೆ ಹೊಂದಿದರು. ಕುದುರೆಯ ಏರಾಟದಲ್ಲಂತೂ ಅವರನ್ನು ಸರಿಗಟ್ಟುವವರೇ ಇರಲಿಲ್ಲ. ನೃತ್ಯ, ಸಂಗೀತ, ಮೃದಂಗ, ವೇಣು ಮೊದಲಾದ ಗಾಂಧರ್ವ ವಿದ್ಯೆಯ ಹೃದಯವನ್ನು ಅರಿತುಕೊಂಡರು. ರಾಮಾಯಣ – ಮಹಾಭಾರತ, ಭಾಗವತಗಳು ಅವರ ತುದಿನಾಲಗೆಯ ಮೇಲೆ ಕುಣಿಯುತಿದ್ದುವು.

ದಿನವೂ ಗರಡೀ ಸಾಧಕ ಮಾಡುತ್ತಿದ್ದುದರಿಂದ ಚಂದ್ರಾಪೀಡ ಭೀಮಕಾಯನಾಗಿದ್ದ. ವೈಶಂಪಾಯನ ಶಾರೀರಿಕ ಶಕ್ತಿಯಲ್ಲಿ ಮಾತ್ರ ಚಂದ್ರಾಪೀಡನನ್ನು ಸರಿಗಟ್ಟುತ್ತಿರಲಿಲ್ಲ. ಉಳಿದೆಲ್ಲ ವಿಷಯುಗಳಲ್ಲಿ ಇಬ್ಬರೂ ಒಂದೇ ಮಟ್ಟದಲ್ಲಿದ್ದರು. ಅವರ ಗೆಳೆತನ ದಿನದಿನಕ್ಕೆ ಬೆಳೆಯುತ್ತಿತ್ತು, ಕಳೆಯೇರುತ್ತಿತ್ತು.

ಮಕ್ಕಳು ಸಕಲ ವಿದ್ಯಾಪಾರಂಗತರಾದರು. ಹೊಸ ಹರಯದ ಹೊಸತಿಲಲ್ಲಿ ಕಾಲಿಟ್ಟರು. ಅವರನ್ನು ಕಂಡು ತಾಯ್ತಂದೆಗಳಿಗೆ ಧನ್ಯತೆ ಎನಿಸಿತು. ಒಂದು ದಿನ ಅರಸು ಗುರುಗಳಿಗೆ ತಕ್ಕ ಸತ್ಕಾರ ಮಾಡಿದ; ಅವರ ಅಪ್ಪಣೆಯಿಂದ ಮಕ್ಕಳನ್ನು ಕರೆತರಲು ನಗರಕ್ಕೆ **ಬಲಾಹಕ** ಎಂಬ ಸೇನಾಪತಿಯನ್ನು ವಿದ್ಯಾಲಯಕ್ಕೆ ಕಳಿಸಿದ.

ಸೇನಾಪತಿ ಯುವರಾಜನನ್ನು ಶಿಷ್ಟಾಚಾರ ಪೂರ್ವಕವಾಗಿ ಕಂಡು ಬಿನ್ನಯಿಸಿದ— ರಾಜಕುಮಾರರೇ, ನೀವು ಶಸ್ತ್ರ - ಶಾಸ್ತ್ರ ಕಲೆಗಳಲ್ಲಿ ಪ್ರವೀಣರಾಗಿದ್ದೀರಿ. ಇದರಿಂದ ನಮ್ಮೆಲ್ಲರ ಹಂಬಲು ಹಣ್ಣಾಗಿವೆ. ಈಗ ತಮ್ಮನ್ನು ಕಾಣಲು ರಾಜಪರಿವಾರದವರೂ ನಗರದ ನರ-ನಾರಿ ಯರೂ ಕುತೂಹಲಿಗಳಾಗಿದ್ದಾರೆ. ಇಲ್ಲಿ ಬಂದಾಗ ಆರು ವರುಷ ದವರಿದ್ದಿರಿ; ಈಗ ಹದಿನಾರರ ಮಟ್ಟವನ್ನು ಮುಟ್ಟಿದ್ದೀರಿ. ಇನ್ನು ಅರಮನೆಗೆ ದಯಮಾಡಿಸಬೇಕು; ಮಹಾರಾಜರಿಗೂ ಗುರುಗಳಿಗೂ ಪ್ರಜೆಗಳಿಗೂ ಪರಮಾನಂದವನ್ನು ಈಯಬೇಕು. ತಮ್ಮ ಸಲುವಾಗಿ ಪ್ರಭುಗಳು ವಾಯುವೇಗದ **ಇಂದ್ರಾಯುಧ** ಎಂಬ ಅಶ್ವರತ್ನವನ್ನು ಕಳಿಸಿದ್ದಾರೆ. ಅದು ಬಾಗಿಲಲ್ಲಿಯೇ ನಿಂತು ತಮ್ಮ ದಾರಿಯನ್ನು ನೋಡುತ್ತಿದೆ. ಬೇಗನೆ ಅದನ್ನು ಏರಬೇಕು. ತಮ್ಮನ್ನು ಸ್ವಾಗತಿಸಲು ಹಲವಾರು ಜನ ರಾಜಕುಮಾರರು ಹೊರಗೆ ಸಜ್ಜಾಗಿ ನಿಂತಿದ್ದಾರೆ.

ಚಂದ್ರಾಪೀಡ ಇಂದ್ರಾಯುಧನನ್ನು ಒಳಗೆ ತರಿಸಿಕೊಂಡ. ಇಂದ್ರನ ಉಚ್ಚೈಃಶ್ರವಸ್ಸಿನ ಸರ್ವ ಶುಭಲಕ್ಷಣಗಳೂ ಅದಕ್ಕೆ ಇದ್ದುವು. ಎತ್ತರದ ಆಳು ತುದಿಗಾಲದ ಮೇಲೆ ನಿಂತರೂ ಅದರ ಬೆನ್ನನ್ನು ಮುಟ್ಟುವುದು ಕಷ್ಟವಾಗುತ್ತಿತ್ತು— ಅದು ಹೆಜ್ಜೆ ಹೆಜ್ಜೆಗೆ ಕತ್ತನ್ನು ಮೇಲೆ ಕೆಳಗೆ ಮಾಡಿ ಯುವರಾಜನಿಗೆ ಸ್ವಾಗತವನ್ನು ಕೋರುತ್ತಿತ್ತು. ಅದರ ಹಣೆಯ ಮೇಲೆ ಪದ್ಮರಾಗ ಮಣಿ ಒಪ್ಪುತ್ತಿತ್ತು. ಕೊರಳಲ್ಲಿ ದೊಡ್ಡ ದೊಡ್ಡ ಮುತ್ತಿನ ಮಾಲೆ ಹಾಕಲಾಗಿತ್ತು.

ಇಂದ್ರಾಯುಧನ ಶುಭ ಲಕ್ಷಣಗಳನ್ನು ನೋಡಿ ಚಂದ್ರಾಪೀಡ ಚಕಿತನಾದ. ಈ ಅಶ್ವರತ್ನ ಮುನಿಶಾಪದಿಂದ ಈ ರೂಪವನ್ನು ಪಡೆದ

ಯಾವುದೋ ದೇವತೆಯಾಗಿರಲಾರದೇ? ಹೇಗಿದ್ದರೂ ಇದು ನನಗೆ ದೇವತಾ ಸಮಾನವೇ, ಎಂದುಕೊಂಡ; ಅದನ್ನು ಏರಲು ಸಿದ್ಧನಾದ. ಆಗ– ಮಹಾತ್ಮಾ, ನೀನು ಯಾರೇ ಇರು. ನಿನಗೆ ನನ್ನ ಪ್ರಣಾಮ ಗಳು ಸಲ್ಲಬೇಕು— ಎಂದು ಬೆನ್ನು ಮುಟ್ಟಿ ನಮಸ್ಕಾರ ಮಾಡಿದ.

ಇಂದ್ರಾಯುಧ, ಆತನ ಅಭಿಪ್ರಾಯವನ್ನು ತಿಳಿಯಿತೋ ಎನು ವಂತೆ, ಅವನನ್ನು ಅರಳುಗಣ್ಣುಗಳಿಂದ ನೋಡಿತು; ತನ್ನ ಬೆನ್ನ ಮೇಲೆ ಏರಲು ಬಲಗಾಲಿನಿಂದ ನೆಲ ಕೆದರಿ ಸನ್ನೆ ಮಾಡಿತು.

ಚಂದ್ರಾಪೀಡ ಅಶ್ವರತ್ನವನ್ನು ಏರಿದ; ವಿದ್ಯಾಲಯದ ಹೊರವಲ ಯಕ್ಕೆ ಬಂದ. ನೆರೆದ ರಾಜಕುಮಾರರು ಮೇಲಾಟದಿಂದ ಮುಂದೆ ಬಂದು ಯುವರಾಜನನ್ನು ಸ್ವಾಗತಿಸಿದರು. ಬಲಾಹಕ ಅವರೆಲ್ಲರ ಪರಿಚಯ ಮಾಡಿಕೊಟ್ಟ ಚಂದ್ರಾಪೀಡನಿಗೆ. ಚತುರಂಗ ಸೇನೆ ಸೈನಿಕ ಮನ್ನಣೆಯನ್ನು ಅರ್ಪಿಸಿತು. ಚಂದ್ರಾಪೀಡ ವಾದ್ಯ ವೈಭವ, ವಂಧಿ ಮಾಗಧರ ಉಗ್ಗಡಣೆ ಇವುಗಳೊಡನೆ ರಾಜ ಬೀದಿಗಳಲ್ಲಿ ಸಾಗಿದ. ವೈಶಂಪಾಯನ ಆತನನ್ನು ಅನುಸರಿಸಿಯೇ ಇದ್ದ.

ಪ್ರಜೆಗಳಿಗೆಲ್ಲ ಆನಂದ ಕೊಡುತ್ತ ಚಂದ್ರಾಪೀಡ ರಾಜಗೃಹದ ಮಹಾದ್ವಾರದ ಮುಂದೆ ಬಂದ; ಇಂದ್ರಾಯುಧದಿಂದ ಕೆಳಗಿಳಿದ. ಮಂಗಲ ವಾದ್ಯಗಳು ಮತ್ತೆ ಮೊಳಗಿದುವು. ಸುವಾಸಿನಿಯರು ಮಂಗಲಾರತಿ ಎತ್ತಿದರು. ವಂದಿಮಾಗಧರು ಪರಾಕು ಹೇಳಿದರು. ಬಳಿಕ ವೈಶಂಪಾಯನ ಸಹಿತನಾಗಿ ಯುವರಾಜ ಸಭಾಭವನವನ್ನು ಪ್ರವೇಶಿಸಿದ. ತಾರಾಪೀಡ ಎದೆಗಡಲು ಉಕ್ಕಿ ಬಂದು ಆನಂದಾಶ್ರು ಗಳನ್ನು ಸುರಿಸುತ್ತ ಸಿಂಹಾಸನದ ಮೇಲೆ ಕುಳಿತಿದ್ದ. ಚಂದ್ರಾಪೀಡ ದೂರದಿಂದಲೇ ನೆಲಮುಟ್ಟಿ ನಮಸ್ಕಾರ ಮಾಡಿದ. ಆತನ ಪಿತೃಭಕ್ತಿ ಯನ್ನು ರಾಜಸಭೆ ಬಾಯಿಬಿಟ್ಟು ಹೊಗಳಿತು. ಅರಸು ಸಿಂಹಾಸನ ದಿಂದ ಇಳಿದು ಬಂದ; ಮಗನನ್ನು ವೈಶಂಪಾಯನನನ್ನು ಬಿಗಿದಪ್ಪಿ ಕೊಂಡ. ಅವರಿಬ್ಬರನ್ನು ತನ್ನ ಆಸನದ ಮೇಲೆಯೇ ಕುಳ್ಳಿರಿಸಿ ಕೊಂಡ. ಪರಿಚಾರಿಕೆಯರು ಚಾಮರಗಳನ್ನು ಬೀಸತೊಡಗಿದರು.

ಬಳಿಕ ಚಂದ್ರಾಪೀಡ ವೈಶಂಪಾಯನ ಸಹಿತನಾಗಿ ರಾಣೀವಾಸಕ್ಕೆ ತೆರಳಿದ. ವಿಲಾಸವತೀ ಮಾತೃದೇವಿಯ ಚರಣಗಳನ್ನು ವಂದಿಸಿದ. ಬಿಳಿಯ ಬಟ್ಟೆಗಳನ್ನು ಧರಿಸಿದ್ದ ಮಹಾರಾಣಿ, ಹಾಲ್ಗಡಲಿನಿಂದ ಎದ್ದು ಬಂದ ಲಕ್ಷ್ಮೀದೇವಿಯಂತೆ ಸೊಂಪೇರಿದ್ದಳು. ಆಕೆ ಕೂಡಲೆ ಮಗನನ್ನು ಎತ್ತಿ ಬಿಗಿದಪ್ಪಿಕೊಂಡು ಮುದ್ದಾಡಿದಳು. ಆತನನ್ನು ತನ್ನ ಹತ್ತಿರವೇ ಕುಳ್ಳಿರಿಸಿಕೊಂಡಳು. ವೈಶಂಪಾಯನನನ್ನು ಕೂಡ ಪುತ್ರ ಪ್ರೇಮದಿಂದ ಪಕ್ಕದ ಆಸನದಲ್ಲಿಯೇ ಕುಳ್ಳಿಸಿರಿಕೊಂಡಳು. ಆ ಮೇಲೆ ತಾಯ್ಗರುಳಿನಿಂದ ಮಗನ ಮೈಮೇಲೆ ಕೈಯಾಡುತ್ತ– ಮಗೂ, ನಿನ್ನ ತಂದೆಯವರಿಗೆ ಅದೆಂತಹ ಕಲ್ಲೆದೆಯೋ! ಸುಕುಮಾರನಾದ ನಿನ್ನನ್ನು ಗುರುಕುಲದ ಕಠಿನ ಜೀವನಕ್ಕೆ ಕಳಿಸಿಕೊಟ್ಟಿದ್ದರು. ಅಲ್ಲಿಯ ಕಷ್ಟಗಳನ್ನು ಹೇಗೆ ತಡೆದುಕೊಂಡೆಯಪ್ಪಾ! ಎಳೆ ವಯಸ್ಸಿನಲ್ಲಿಯೂ ಬೆಳೆದವರಿಗಿಂತ ಬಲವಾದ ಧೈರ್ಯ ನಿನ್ನದು! ಗುರುಗಳ ಕೃಪೆಯಿಂದ ವಿದ್ಯಾವಂತನಾಗಿರುವಿ. ಇನ್ನು ಅನುರೂಪ ಪತ್ನಿಯ ಕೈ ಹಿಡಿದು ನಮ್ಮನ್ನು ಸಂತೋಷಪಡಿಸು........ ಮುಂತಾಗಿ ಹೆಂಗರುಳಿನ ಹುಟ್ಟುಗುಣಕ್ಕೆ ತಕ್ಕಂತೆ ಮಾತನಾಡಿದಳು. ಬಳಿಕ ಚಂದ್ರಾಪೀಡ ಉಳಿದ ತಾಯಂದಿರಿಗೂ ನಮಸ್ಕರಿಸಿದ; ಅವರ ಹರಕೆಗಳನ್ನು ಪಡೆದ.

ಆ ಮೇಲೆ ಮಕ್ಕಳಿಬ್ಬರೂ ಶುಕನಾಸ ಮಂತ್ರಿಯ ಮನೆಗೆ ಪಯಣ ಬೆಳೆಸಿದರು. ಅಲ್ಲಿ ಕೂಡ ಇವರ ಸ್ವಾಗತಕ್ಕಾಗಿ ಜನಸಮ್ಮರ್ದ ನೆರೆದಿತ್ತು. ಪುರೋಹಿತರು ಸ್ವಸ್ತಿವಾಚನ ಹೇಳಲು ಸಿದ್ಧರಾಗಿದ್ದರು. ಚಂದ್ರಾಪೀಡ ವೈಶಂಪಾಯನರು ಕುದುರೆಗಳಿಂದ ಇಳಿದರು; ಮಂತ್ರಿಗಳಿಗೆ ತಲೆ ಬಾಗಿ ವಂದಿಸಿದರು.

ಶುಕನಾಸನ ನೇತ್ರಗಳಿಂದ ಆನಂದಾಶ್ರುಗಳು ಪಳಪಳನೆ ಉದಿರಿದುವು. ಅವನು ಅವರಿಬ್ಬರನ್ನು ಬಿಗಿದಪ್ಪಿದ. ಆ ಸಂತೋಷ ಭರದಲ್ಲಿ ತುಸು ಹೊತ್ತು ಯಾರಿಂದಲೂ ಮಾತುಗಳೇ ಹೊರಡಲಿಲ್ಲ. ಆ ಮೇಲೆ ಮಂತ್ರಿಗಳು—

"ವತ್ಸ ಚಂದ್ರಾಪೀಡರೇ, ಸಕಲವಿದ್ಯಾಪಾರಂಗತರಾದ ನಿಮ್ಮಿಂದ

ತಾರಾಪೀಡ ಮಹಾರಾಜರಿಗೆ ಸಕಲಸೌಭಾಗ್ಯಗಳೂ ದೊರೆತಂತಾಗಿದೆ. ಇಂದಿಗೆ ಗುರುಜನರ ಆಶೀರ್ವಾದ ಫಲಿಸಿತು. ಕುಲದೇವತೆಗಳು ಪ್ರಸನ್ನರಾದರು. ಪ್ರಜೆಗಳು ಧನ್ಯರಾದರು. ಪೃಥ್ವೀದೇವಿಗೆ ಯೋಗ್ಯ ಪತಿ ದೊರೆತಂತಾಯಿತು. ವರಾಹಸ್ವಾಮಿಯಂತೆ ನೀವಿನ್ನು ಭೂಭಾರ ವನ್ನು ವಹಿಸಿಕೊಳ್ಳಬೇಕು." ಎಂದು ಸದುಪದೇಶ ಮಾಡಿದರು; ಬಳಿಕ ಯುವರಾಜನನ್ನು ವಸ್ತ್ರಭೂಷಣಗಳಿಂದ ಸತ್ಕರಿಸಿದರು.

ಆ ಮೇಲೆ ಚಂದ್ರಾಪೀಡ ಮಾತಾ ಮನೋರಮಾ ದೇವಿಗೆ ನಮ ಸ್ಕಾರ ಮಾಡಿದ. ಅವರಿಂದ ಶುಭಾಶೀರ್ವಾದಗಳನ್ನು ಪಡೆದು, ಇಂದ್ರಾ ಯುಧವನ್ನು ಏರಿ ತನ್ನ ಅರಮನೆಗೆ ಸಾಗಿದ. ಅಲ್ಲಿ ಗೃಹಪ್ರವೇಶ ಸಮಾರಂಭ ಸಾಂಗವಾಯಿತು. ಬಳಿಕ ಮಂಗಲ ಸ್ನಾನ ಮುಗಿಯಿತು. ರಾಜಕುಮಾರರೊಡನೆ ಭೋಜನ ಸಮಾರಂಭ ನೇರವೇರಿತು. ಬಳಿಕ ಚಂದ್ರಾಪೀಡ ತನಗಾಗಿ ಗೊತ್ತುಮಾಡಿದ ಪ್ರಾಸಾದದಲ್ಲಿ ವಿಶ್ರಾಂತಿ ಯನ್ನು ಪಡೆದ. ಇಂದ್ರಾಯುಧಕ್ಕೂ ಅಲ್ಲಿಯೇ ಆಶ್ರಯಕೊಟ್ಟ.

---

## ೫. ಶುಕನಾಸರ ಸದುಪದೇಶ

....ಮರುದಿನ ಮುಂಜಾವದಲ್ಲಿ ಚಂದ್ರಾಪೀಡ ತಂದೆಯ ಅಪ್ಪಣೆ ಪಡೆದ; ಬೇಟೆಯಾಡುವುದಕ್ಕಾಗಿ ಅರಣ್ಯದ ಕಡೆಗೆ ನಡೆದ. ನಡು ಹಗಲಿನ ವರೆಗೆ ಬೇಟೆಯಾಡಿ ದಣಿದು ಅರಮನೆಗೆ ಮರಳಿದ. ಆ ಮೇಲೆ ಮೃಗಯಾ ವೇಷವನ್ನು ತೆಗೆದು ತುಸು ಹೊತ್ತು ವಿಶ್ರಮಿಸಿದ.

ಅಷ್ಟರಲ್ಲಿ ಅಭ್ಯಂಗ ಸ್ನಾನದ ಸಿದ್ಧತೆ ಆಗಿತ್ತು. ಪರಿಚಾರಿಕೆಯರು ಆತನ ಮೈಗೆ ಸುಗಂಧ ತೈಲಗಳನ್ನು ಪೂಸಿದರು; ಚಿನ್ನದ ಕಲಶ ಗಳಿಂದ ನೀರೆರೆದರು. ಬಳಿಕ ರಾಜಕುಮಾರ ಮಡಿ ವಸ್ತ್ರಗಳನ್ನು ಉಟ್ಟು ದೇವಪೂಜಾವಿಧಿಯನ್ನು ನೆರವೇರಿಸಿದ; ಪಂಚ-ಪಕ್ವಾನ್ನಗಳ ನೈವೇದ್ಯ ತೋರಿಸಿದ. ತರುವಾಯ ಶೃಂಗಾರ ಗೃಹದಲ್ಲಿ ದಾಸಿಯರು ಆತನಿಗೆ ಬಗೆಬಗೆಯ ಅಂಗರಾಗಗಳನ್ನು ಲೇಪಿಸಿದರು; ವಸ್ತ್ರ–

ಭೂಷಣಗಳನ್ನು ತೊಡಿಸಿದರು. ಭೋಜನ ಮಂದಿರದಲ್ಲಿ ಸಕಲ ರಾಜ ಕುಮಾರರೊಡನೆ ಆತನ ಸುಗ್ರಾಸ ಭೋಜನವಾಯಿತು. ಇದೇ ಆನಂದದಲ್ಲಿಯೇ ಹಗಲು-ಇರುಳು ಕಳೆದುವು.

ಒಂದು ಮಂಗಲ ಪ್ರಭಾತದಲ್ಲಿ **ಕೈಲಾಸಕ** ಎಂಬ ಕರಣಿಕ **ಪತ್ರ ಲೇಖೆ** ಎಂಬ ಸುಂದರ ಕನ್ಯೆಯೊಡನೆ ಚಂದ್ರಾಪೀಡನ ಸಮೀಪವನ್ನು ಸೇರಿದ; ಸನ್ಮಾನಪೂರ್ವಕವಾಗಿ— ಒಡೆಯರೆ, ವಿಲಾಸವತೀ ದೇವಿ ಯವರ ಅಪ್ಪಣೆಯ ಮೇರೆಗೆ ನಾನು ಇವಳನ್ನು ಕರೆತಂದಿರುವೆ. ಹಿಂದಕ್ಕೆ ನಮ್ಮ ದೊರೆಗಳು **ಕುಲೂತೇಶ್ವರ**ನನ್ನು ಗೆದ್ದಿದ್ದರು. ಈಕೆ ಆತನ ಮಗಳು. ಇವಳನ್ನು ಅರಸರು ಮಹಾರಾಣಿಯವರ ವಶಕ್ಕೆ ಕೊಟ್ಟಿದ್ದರು. ದೇವಿಯವರು ಈಕೆಯ ಸದ್ಗುಣಗಳನ್ನು ಮೆಚ್ಚಿ ಮಗ ಳಂತೆ ಕಾಪಾಡಿದ್ದಾರೆ. ಈಗ ನಿಮ್ಮ ತಾಂಬೂಲಕರಡಿಗೆ ಹಿಡಿಯುವ ಕೆಲಸಕ್ಕೆ ನಿಯಮಿಸಿದ್ದಾರೆ. ಇವಳು ಸತ್ಕುಲದಲ್ಲಿ ಹುಟ್ಟಿದವಳು; ಗೌರವದಿಂದ ಬೆಳೆದವಳು. ತಾವು ಕೂಡ ಇವಳನ್ನು ಮರ್ಯಾದೆ ಯಿಂದಲೇ ನಡೆಸಿಕೊಳ್ಳಬೇಕೆಂದು ದೇವಿಯವರು ತಿಳಿಸಿದ್ದಾರೆ— ಎಂದು ಹೇಳಿದ.

ಚಂದ್ರಾಪೀಡ ಮಾತ್ರಾಜ್ಞೆಯನ್ನು ಶಿರಸಾವಹಿಸಿದ. ಅಂದಿನಿಂದ ಪತ್ರಲೇಖೆ ರಾಜಕುಮಾರನ ನೆರಳಿನಂತೆ, ಸರ್ವ ಕಾರ್ಯಗಳಲ್ಲಿ ಸರ್ವ ಸ್ಥಳಗಳಲ್ಲಿ ಅವನೊಡನೆ ಇದ್ದೇ ಇರುತ್ತಿದ್ದಳು. ತನ್ನ ಅಂತರಂಗದ ಮಾತುಗಳನ್ನು ಅವಳಿಗೆ ಹೇಳುವಷ್ಟು ಅವರಿಬ್ಬರ ಸ್ನೇಹ ಬೆಳೆಯಿತು.

ಮುಂದೆ ಚಂದ್ರಾಪೀಡನಿಗೆ ಯುವರಾಜ ಪಟ್ಟವನ್ನು ಕೊಡುವ ಸಕಲ ಸಿದ್ಧತೆಗಳು ನಡೆದುವು. ಆ ಮೊದಲು ಚಂದ್ರಾಪೀಡ ಶುಕನಾಸ ಮಂತ್ರಿಗಳನ್ನು ಕಂಡ. ಮಂತ್ರಿಗಳು ಮುಂದಾಗುವ ಮಹಾರಾಜನಿಗೆ ಸದುಪದೇಶ ಮಾಡಿದರು:

ವತ್ಸಾ, ನೀವು ಗುರುಕುಲದಲ್ಲಿ ಸರ್ವಶಾಸ್ತ್ರಗಳನ್ನೂ ಕಲಿತಿದ್ದೀರಿ. ಹೊಸಹರಯದ ಮಬ್ಬು, ಸಂಪತ್ತಿನ ಸೊಕ್ಕು, ಅಧಿಕಾರದ ಅಬ್ಬರ, ಕಾಮದ ಕುರುಡುತನ, ಅರಸೊತ್ತಿಗೆಯ ಆಲಸ್ಯ.... ಇವುಗಳನ್ನು

ಚೆನ್ನಾಗಿ ಅರಿತಿದ್ದೀರಿ. ಅವುಗಳನ್ನೇ ತುಸು ಹಿಗ್ಗಿಸಿ ಹೇಳಬಹುದಾದರೆ—

ಯೌವನ, ಧನ ಸಂಪತ್ತಿ, ಪ್ರಭುತ್ವ ಮತ್ತು ಅವಿವೇಕ– ಇವುಗಳಲ್ಲಿ ಒಂದೊಂದೇ ಸಾಕು ಮಾನವನನ್ನು ಮಣ್ಣು ಕೂಡಿಸುವುದಕ್ಕೆ. ಇವೆಲ್ಲವೂ ಒಂದೇ ಕಡೆಗೆ ಕೂಡಿದಾಗ ಅವನ ದುರವಸ್ಥೆಯನ್ನು ಹೇಳಬೇಕೆ ? ಅರಸರಲ್ಲಿ ಈ ನಾಲ್ಕು ಅಪಾಯಗಳೂ ಒಟ್ಟಾಗಿಯೇ ಇರುತ್ತಿವೆ. ಅದರಿಂದ, ಅವರು ಸದಾ ಸಂಪೂರ್ಣ ಎಚ್ಚರಿಕೆಯಿಂದಲೇ ಇರಬೇಕಾಗುತ್ತಿದೆ. ಇಲ್ಲವಾದರೆ.... ?

ಮಂಗಲ ಸ್ನಾನದಿಂದ ಸೌಜನ್ಯ ತೊಳೆದು ಹೋಗುತ್ತಿದೆ. ಹೋಮದ ಧೂಮದಿಂದ ಮನಸ್ಸು ಮಲಿನವಾಗುತ್ತಿದೆ. ಕುಶಸ್ಪರ್ಶದಿಂದ ಕ್ಷಮಾಗುಣ ಕಾಲು ಕೀಳುತ್ತಿದೆ. ತಲೆಯ ಮೇಲೆ ಬಂದ ಕಿರೀಟ ಮುಂದೆ ಮುಪ್ಪು ಬರುವುದನ್ನು ಮರೆಸಿಬಿಡುತ್ತಿದೆ. ಛತ್ರವನ್ನು ಹಿಡಿಸಿಕೊಳ್ಳುತ್ತಲೇ ಮೇಲಿನ ಲೋಕ ಮರೆಯಾಗುತ್ತಿದೆ. ಚಾಮರದ ಗಾಳಿಗೆ ಸತ್ಯ ಹಾರಿ ಹೋಗುತ್ತಿದೆ. ರಾಜದಂಡಕ್ಕೆ ಹೆದರಿ ಸದ್ಗುಣಗಳು ಸರಿದು ಹೋಗುತ್ತಿವೆ. ಜಯಜಯಕಾರಗಳನ್ನು ಕೇಳಿದ ಕಿವಿಗಳಿಗೆ ಸದುಪದೇಶಗಳು ಸವಿಯೆನಿಸುವುದಿಲ್ಲ......... ಹೀಗೆ ಅರಸೊತ್ತಿಗೆ ಅನೇಕ ಅವಗುಣಗಳಿಗೆ, ಅನಾಚಾರಗಳಿಗೆ ತವರ ಮನೆಯಾಗುತ್ತಿದೆ.

ಇಂತಹ ಅರಸರನ್ನು ಸ್ವಾರ್ಥಸಾಧಕರು ಬಹುಬೇಗ ಅಡ್ಡದಾರಿಯಲ್ಲಿ ಎಳೆಯುತ್ತಾರೆ. ಜೂಜಾಡುವುದೇ ವಿನೋದ, ಪರಸ್ತ್ರೀ ಸಹವಾಸವೇ ಚತುರತೆ; ಬೇಟೆಯಾಡುವುದೇ ವ್ಯಾಯಾಮ, ಸೆರೆಗುಡುಕತನವೇ ವಿಲಾಸ, ಸೊಕ್ಕೇ ಶೌರ್ಯ, ಮನೆಯ ಮಡದಿಯನ್ನು ಮನ್ನಿಸದಿರುವುದೇ ವೈರಾಗ್ಯ, ಸೂಳೆಯರ ಸಂಗೀತ ನೃತ್ಯಗಳಲ್ಲಿ ಬೆರೆಯುವುದೇ ರಸಿಕತನ, ತಪ್ಪುಗಳನ್ನು ತಿರಸ್ಕರಿಸುವುದೇ ಉದಾರತನ, ಅಪಜಯವನ್ನು ಒಪ್ಪಿಕೊಳ್ಳುವುದೇ ಕ್ಷಮೆ, ಉದ್ದಾಮತನವೇ ಪ್ರಭುತ್ವ, ದೇವತೆಗಳ ತಿರಸ್ಕಾರವೇ ವೀರತನ, ಯುಕ್ತಾಯುಕ್ತಗಳ ತಾರತಮ್ಯ

ಜ್ಞಾನವಿಲ್ಲದಿರುವುದೇ ನಿಷ್ಪಕ್ಷಪಾತತನ....ಮುಂತಾಗಿ ಅರಸರಿಗೆ ನೀತಿ ಶಾಸ್ತ್ರವನ್ನು ಪಾಠ ಮಾಡಿರುತ್ತಾರೆ.

ಇದರಿಂದಾಗಿ, ದೊರೆಗಳು ದೇವ–ಧರ್ಮಗಳನ್ನು ದೂರ ಮಾಡುತ್ತಾರೆ; ಗುರುಜನರನ್ನು ಗೌರವಿಸುವುದಿಲ್ಲ, ಸಜ್ಜನರನ್ನು ಸಮ್ಮಾನಿಸುವುದಿಲ್ಲ; ಪಂಡಿತರಿಗೆ ಪರಿಹಾಸ ಮಾಡುತ್ತಾರೆ; ಬಲ್ಲವರ ಮಾತಿಗೆ ಬಡಬಡಿಕೆ ಎನ್ನುತ್ತಾರೆ; ಆಪ್ತವಚನಗಳನ್ನು ಅಲ್ಲಗಳೆಯುತ್ತಾರೆ; ಮುಖಸ್ತುತಿ ಮಾಡುವವರನ್ನು ಮೆಚ್ಚುತ್ತಾರೆ, ಅವರನ್ನೇ ತಮ್ಮ ಪರಿವಾರದಲ್ಲಿ ತೆಗೆದುಕೊಳ್ಳುತ್ತಾರೆ, ಅಂಥವರಿಗೆ ಸಂಪತ್ತನ್ನು ಕೈಬಿಚ್ಚಿ ಕೊಡುತ್ತಾರೆ....

ಯುವರಾಜರೇ, ನೀವಿಗ ಇಂತಹ ಕಷ್ಟಕರವಾದ ಮತ್ತು ಕುಟಿಲವಾದ ರಾಜಶಾಸನವನ್ನು ಸ್ವೀಕರಿಸಬೇಕಾಗಿದೆ. ಇದರಲ್ಲಿಯೇ ನೀವು ಬುದ್ಧಿಬಲದಿಂದ, ಗುರು–ಹಿರಿಯರ ಸಾಧು–ಸತ್ಪುರುಷರ ನಿಂದೆಗೆ ಈಡಾಗದಂತೆ ರಾಜ್ಯ ಕಾರ್ಯಗಳನ್ನು ಕೊನೆಗಾಣಿಸಬೇಕು. ಕುಲದೇವತೆಗಳು ನಿಮ್ಮ ಕಲ್ಯಾಣ ಮಾಡಲಿ. ನಿಮ್ಮ ಪಿತೃ ಪೂರ್ವಜರಂತೆ ಅಖಂಡ ಭೂಮಂಡಲದ ಒಡೆಯರಾಗಿರಿ.

ಮಂತ್ರಿಗಳ ಮಮತೆಯ ಹಿತವಚನಗಳಿಂದ ಚಂದ್ರಾಪೀಡನಿಗೆ ಹೊಸ ಹುಟ್ಟು ಬಂದಂತೆ ಹರುಷವಾಯಿತು. ಅವರ ಅಗಾಧ ಅನುಭವವನ್ನು ವಾಣಿಯ ವಿಚಾರಪರತೆಯನ್ನು ಮೆಲುಕು ಹಾಕುತ್ತ ತುಸು ಹೊತ್ತು ಸುಮ್ಮನೆ ಕುಳಿತ. ಬಳಿಕ ಅವರ ಅಪ್ಪಣೆ ಪಡೆದು ಅರಮನೆಗೆ ಮರಳಿದ.

ಕೆಲವು ದಿವಸಗಳ ತರುವಾಯ ಯೌವರಾಜ್ಯಾಭಿಷೇಕದ ಸಿದ್ಧತೆ ನಡೆಯಿತು. ಪುರೋಹಿತರು ಸರ್ವ ಶುಭ ವಸ್ತುಗಳನ್ನು ಸಂಗ್ರಹಿಸಿದರು. ಚಂದ್ರಾಪೀಡ ಸುವರ್ಣ ಸಿಂಹಾಸನವನ್ನು ಏರಿದ. ಭೇರಿ ದುಂದುಭಿಗಳು ಧ್ವನಿಮಾಡಿದುವು. ವಂದಿಮಾಗಧರು ಜಯಕಾರ ಮಾಡಿದರು. ಸೇನಾಪತಿಗಳು ಸೇನಾವಂದನೆಯನ್ನು ಸಲ್ಲಿಸಿದರು. ವಿಧಿವಿಧಾನಪೂರ್ವಕವಾಗಿ ಪಟ್ಟಾಭಿಷೇಕ ನೆರವೇರಿತು. ಬಳಿಕ

ಪಟ್ಟದಾನೆಯ ಮೇಲೆ ಯುವರಾಜನ ಮೆರವಣಿಗೆ ಮುನ್ನಡೆಯಿತು. ಪತ್ರಲೇಖೆ ಆತನ ಹಿಂಬದಿಯಲ್ಲಿಯೇ ಕುಳಿತಿದ್ದಳು. ವೈಶಂಪಾಯನ ಮತ್ತೊಂದು ಆನೆಯನ್ನು ಏರಿದ. ವಾದ್ಯಗಳ ನಿನಾದದಿಂದಲೂ ಪರಿವಾರದ ಕೋಲಾಹಲದಿಂದಲೂ ಕೇಳುಗರ ಕಿವಿಗಳು ಗಡಚಿಕ್ಕಿದುವು. ಈ ಮೇರೆಗೆ ಅದೆಷ್ಟೋ ದಿವಸ ಸಂತೋಷ ಸಮಾರಂಭಗಳು ನಡೆದುವು.

—

## ೬. ಮಹಾಸತಿ ಮಹಾಶ್ವೇತೆ

ಬಳಿಕ ಒಂದು ಶುಭ ದಿವಸದಲ್ಲಿ ಚಂದ್ರಾಪೀಡ–ವೈಶಂಪಾಯನ ಸಹಿತನಾಗಿ ದಿಗ್ವಿಜಯಕ್ಕೆ ಹೊರಟ. ನಾಲ್ಕು ನಿಟ್ಟುಗಳ ಅರಸುಗಳನ್ನು ಗೆಲ್ಲುತ್ತ ಕೈಲಾಸಗಿರಿಯ ನೆರೆಯಲ್ಲಿ **ಹೇಮಜಟ** ಎಂಬ ಕಿರಾತರಾಜನ ರಾಜ್ಯಕ್ಕೆ ಬಂದ; ಆತನ ಸುವರ್ಣಪುರವನ್ನು ಗೆದ್ದ. ಎಡೆಬಿಡದ ಎಡೆಯಾಟದಿಂದ ದಂಡು ದಣಿದಿತ್ತು. ವಿಶ್ರಾಂತಿಗಾಗಿ ಕೆಲವು ಕಾಲ ಅಲ್ಲಿಯೇ ಬೀಡು ಬಿಟ್ಟ.

ಅಲ್ಲಿರುವಾಗ ಒಮ್ಮೆ ಚಂದ್ರಾಪೀಡ ಒಂಟಿಗನಾಗಿ ಬೇಟೆಯಾಡ ಹೊರಟ; ಕಾನನದಲ್ಲಿ ಕಿನ್ನರ ದಂಪತಿಗಳನ್ನು ಕಂಡ. ಅವುಗಳನ್ನು ಹಿಡಿಯುವ ಆತುರದಿಂದ ಅತ್ತ ನಡೆದ. ಕಿನ್ನರರು ಓಡತೊಡಗಿದರು. ಚಂದ್ರಾಪೀಡ ಇಂದ್ರಾಯುಧವನ್ನು ಬೇಗ ಬೇಗ ಓಡಿಸುತ್ತ ಬೆನ್ನಟ್ಟಿದ. ಹೀಗೆಯೇ ಒಂದೆರಡು ಗಳಿಗೆಯೊಳಗೆ ಐವತ್ತು ಅರುವತ್ತು ಗಾವುದ ಹೋಗಿಬಿಟ್ಟ. ಕೊನೆಗೆ ಕಿನ್ನರ ಮಿಥುನ ಎತ್ತರವಾದ ಶಿಖರವನ್ನು ಏರಿಹೋದರು. ಚಂದ್ರಾಪೀಡನಿಗೆ ನಿರಾಶೆಯಾಯಿತು. ತಾನೆಲ್ಲಿ, ತನ್ನ ದಂಡು ಎಲ್ಲಿ ? ದಿಕ್ಕುಗೆಟ್ಟು ಕುಳಿತುಬಿಟ್ಟ ! ಅಷ್ಟರಲ್ಲಿ ಬಿಸಿಲೇರಿ ನೆಲ ಕಾಯಿತು. ಕುದುರೆ ದಣಿದಂತೆ ತೋರಿತು. ತನಗೂ ಬಳಲಿಕೆಯಾಗಿತ್ತು. ಸಮೀಪದಲ್ಲಿ ಜಲಾಶಯವೇನಾದರೂ ಇರಬಹುದೇ, ಎನ್ನುತ್ತ ಅತ್ತಿತ್ತ ನೋಡತೊಡಗಿದ.

ಕೆರೆಯಲ್ಲಿ ಅದೇ ಆಗ ಕ್ರೀಡಿಸಿ ಹೋದ ಕಾಡಾನೆಗಳ ಹೆಜ್ಜೆ ದಾರಿಯಲ್ಲಿ ಕಾಣಿಸಿದುವು. ಅವು ಹಾದಿಗುಂಟ ಚೆಲ್ಲಿದ ಕಮಲನಾಳಗಳನ್ನೂ ಕಂಡ. ಅದರಿಂದ, ಸಮೀಪದಲ್ಲಿ ಸರೋವರವಿರಬಹುದು, ಎಂದು ತರ್ಕಿಸಿದ. ಅಲ್ಲದೆ, ಸುವರ್ಣಪುರದ ಸಮೀಪದಲ್ಲಿಯೇ ದೊಡ್ಡದೊಂದು ಅರಣ್ಯ ಮತ್ತು ಅದರಾಚೆಗೆ ಕೈಲಾಸಗಿರಿ ಇವೆ, ಎಂದೂ ಕೇಳಿದ್ದ. ಅದನ್ನು ನೋಡುವ ಕುತೂಹಲವೂ ಕೆರಳಿತು. ಕೂಡಲೆ ಇಂದ್ರಾಯುಧವನ್ನು ನಡೆಸುತ್ತ, ಸರೋವರದ ಕಡೆಗೆ ಸಾಗಿದ.

ಆ ಸರೋವರ ಶಿವನ ಹಾಸ್ಯವೋ ತಿಂಗಳಿನ ಬೆಳುದಿಂಗಳೋ ವರುಣನ ಕೈಗನ್ನಡಿಯೋ ಎನುವಂತಿತ್ತು. ಅದರ ನೀರು ಚಿಗರೆಗಣ್ಣುಗಳ ಬೆಳಕನ್ನು ಮುತ್ತುಗಳ ಕಾಂತಿಯನ್ನು ಬೆರೆಸಿದಂತೆ ಇತ್ತು. ಅದು ನೀರಿನಿಂದ ತುಂಬಿದ್ದರೂ ತಳದವರೆಗೂ ನಿಚ್ಚಳವಾಗಿ ಕಾಣುತ್ತಿತ್ತು. ಅದರಿಂದಲೇ ಅದು ಅಚ್ಛೋದ ಸರೋವರ ಎಂದು ಹೆಸರು ಪಡೆದಿತ್ತು. ಅಂತಹ ಸುಂದರ ಸರೋವರವನ್ನು ನೋಡುತ್ತಲೇ ಚಂದ್ರಾಪೀಡನ ದಣಿವು ತಣಿದು ಹೋಯಿತು. ಕಿನ್ನರ ಮಿಥುನಗಳನ್ನು ಬೆನ್ನಟ್ಟಿದುದು ಬರಡಾದರೂ ಈ ಜಲಾಶಯದ ನೋಟದಿಂದ ಕಣ್ಣು ಮೊದಲಾದ ಪಂಚೇಂದ್ರಿಯುಗಳೂ ಧನ್ಯವಾದುವು, ಎಂದುಕೊಂಡ.

ಅವನು ಸರಸ್ತೀರದಲ್ಲಿ ಇಂದ್ರಾಯುಧದಿಂದ ಇಳಿದ; ಅದರ ಮೈದೊಳೆದು, ನೀರು ಕುಡಿಸಿ, ಮರದ ನೆರಳಿಗೆ ಕಟ್ಟಿದ; ತಿನ್ನಲು ಎಳಗರಿಕೆಯ ರಾಶಿಯನ್ನು ಹಾಕಿದ. ಹಾಗೆಯೇ ತಾನೂ ಸ್ನಾನ ಮಾಡಿ ಸಮೀಪದ ಬಳ್ಳಿವನೆಯಲ್ಲಿ ಕಮಲ ಪತ್ರಗಳ ಹಾಸಿಗೆಯ ಮೇಲೆ ಅಡ್ಡಾದ.

ಅಷ್ಟರಲ್ಲಿ, ಉತ್ತರ ದಿಕ್ಕಿನಿಂದ ಬರುವ ಸಂಗೀತದ ಸುನಾದ ಕೇಳಿಸಿತು. ಇಂದ್ರಾಯುಧ ಕಿವಿ ನಿಗುರಿಸಿ ಅತ್ತಲೇ ನೋಡುತ್ತಿತ್ತು. ವೀಣಾವಾದನದ ತರಂಗಗಳು ಗಾಳಿಯಲ್ಲಿ ತೇಲಿತೇಲಿ ಬರುತ್ತಿದ್ದುವು. ಇಂತಹ ನಿರ್ಜನವಾದಲ್ಲಿ ಈ ಗಂಧರ್ವಗಾನ ಎಲ್ಲಿಂದ ಕೇಳಿಬರುತ್ತಿದೆ?

ಚಂದ್ರಾಪೀಡನ ಕುತೂಹಲ ಕೆರಳಿತು. ತಡವಿಲ್ಲದೆ ಇಂದ್ರಾಯುಧ

ವನ್ನು ಏರಿ ಅತ್ತಲೇ ಓಡಿದ. ದಾರಿಯಲ್ಲಿ ಬಗೆಬಗೆಯಿಂದ ಕಣ್ಣರಳಿ ಸುವ ತರುಲತೆಗಳು ಕಂಗೊಳಿಸುತ್ತಿದ್ದುವು. ಹಾಗೆಯೇ, ಪಶ್ಚಿಮ ತಟದ ಸಮೀಪದಲ್ಲಿ ಚಂದ್ರಪ್ರಭಾ ಭೂಮಿಯ ಮೇಲೆ ಶಿವನ ಸಿದ್ಧ ಮಂದಿರವನ್ನು ಕಂಡ. ಅದರ ನಾಲ್ಕೂ ನಿಟ್ಟುಗಳಲ್ಲಿ ಮರಕತ ಮಣಿಯ ತೇರುಗಳಂತೆ ತರುಗಳು ಬೆಳೆದಿದ್ದುವು.

ಯುವರಾಜ ಮೆಲ್ಲನೆ ಮಂದಿರವನ್ನು ಸೇರಿದ. ಚರಾಚರ ಸೃಷ್ಟಿಯ ಗುರುವಾದ ಶಿವಲಿಂಗದ ಪವಿತ್ರ ದರ್ಶನವಾಯಿತು. ನಾಲ್ಕು ಕಂಬ ಗಳ ಸ್ಫಟಿಕ ಮಂಟಪದಲ್ಲಿ ಅದನ್ನು ಸ್ಥಾಪಿಸಲಾಗಿತ್ತು. ಪವಿತ್ರ ಗಂಗಾಜಲದ ಅಭಿಷೇಕ ಮಾಡಿ, ಪುಂಡರೀಕ ಕಮಲಗಳಿಂದ ಸಿಂಗ ರಿಸಲಾಗಿತ್ತು. ಆ ಶಿವ ಮಂದಿರದೊಳಗೆ ದಕ್ಷಿಣಾಮೂರ್ತಿಯ ಇದಿ ರಿಗೆ ಬ್ರಹ್ಮಾಸನದಲ್ಲಿ ಕುಳಿತು ಧ್ಯಾನ ಮಾಡುತ್ತಿದ್ದ ಶ್ವೇತವರ್ಣದ ಕನ್ನಿಕೆಯನ್ನು ಕಂಡ. ಅವಳು ಸ್ಫಟಿಕದಿಂದಲೇ ನಿರ್ಮಿಸಿದ ಪುತ್ಥಳಿ ಯಂತೆ ತೋರುತ್ತಿದ್ದಳು; ಅಥವಾ, ಮಹಾದೇವನ ದಕ್ಷಿಣಾಮುಖದ ಹಾಸ್ಯವೇ ಕನ್ಯಾರೂಪದಿಂದ ಕುಳಿತಿದ್ದಿತೆಂದರೂ ಸರಿಯೇ.

ಅವಳು ಅದೇ ಆಗ ಮಿಂದು ಬಂದುದರಿಂದ ಕೇಶಕಲಾಪದಿಂದ ಜಲಬಿಂದುಗಳು ತಟಕಿಕ್ಕುತ್ತಿದ್ದುವು. ಮೈಗೆಲ್ಲ ಭಸ್ಮವನ್ನು ಲೇಪಿಸಿ ಕೊಂಡಿದ್ದಳು. ಮುಡಿಯಲ್ಲಿ ಮಹಾದೇವನ ಚರಣಾಂಕಿತ ಮುದ್ರೆ ಯಿತ್ತು. ಕೈಯಲ್ಲಿ ರುದ್ರಾಕ್ಷ ಜಪಮಾಲೆಯನ್ನು ಹಿಡಿದಿದ್ದಳು. ತೊಡೆಯ ಮೇಲೆ ವೀಣೆಯನ್ನು ಇರಿಸಿಕೊಂಡು ಅದರ ಮೇಲೆ ದಂತ ದಂತಹ ಬೆರಳುಗಳನ್ನು ಲಯಕ್ಕೆ ಸರಿಯಾಗಿ ಆಡಿಸುತ್ತಿದ್ದಳು. ಬೆರಳುಗಳೊಂದಿಗೆ ಕೊರಳನ್ನು ಕೂಡಿಸಿ ಮಹಾದೇವನ ಮಹಿಮೆ ಯನ್ನು ಹಾಡುತ್ತಿದ್ದಳು.

ನವತಾರುಣ್ಯದಲ್ಲಿಯೂ ನಿಶ್ಚಲ ಯೋಗಿನಿಯಂತಿದ್ದ ಆ ಕನ್ಯೆಯನ್ನು ಕಂಡು ಚಂದ್ರಾಪೀಡ ಚಕಿತನಾದ. ಇವಳು ನಿಶ್ಚಯವಾಗಿಯೂ ಮಾನುಷಿಯಲ್ಲ; ದೇವಕನ್ಯೆಯೇ ಇರಬೇಕು. ಇಲ್ಲವಾದರೆ ಈ ಕಮ ನೀಯ ಕಾಯಕಾಂತಿ, ಸ್ವರ್ಗೀಯ ಸಂಗೀತ ಸಾಧನೆ ಬೇರೆ ಯಾರಿಗೆ

ಸಾಧ್ಯವಾಗಬಲ್ಲುವು?... ಹೀಗೆಯೇ ವಿಚಾರಿಸುತ್ತ ಮುಂದೆ ಹೋದ; ಶಿವಲಿಂಗಕ್ಕೆ ಭಕ್ತಿಯಿಂದ ನಮಸ್ಕರಿಸಿದ; ಆ ತಪಸ್ವಿನಿಯ ಧ್ಯಾನ ಮುಗಿಯುವ ವರೆಗೂ ಒಂದೆಡೆಯಲ್ಲಿ ಕುಳಿತ.

ಧ್ಯಾನ ಮುಗಿಯಿತು. ಕನ್ನಿಕೆ ಕಣ್ ತೆರೆದಳು. ಶಿವಲಿಂಗ ಪ್ರದ ಕ್ಷಿಣೆ ಮುಗಿಸಿ ಬಂದು ಚಂದ್ರಾಪೀಡನನ್ನು ಮಾತನಾಡಿಸಿದಳು— ಮಹಾನುಭಾವರೇ ತಾವು ಯಾರೋ ? ಬಹಳ ಹಸಿದಂತೆ ತೋರು ತ್ತಿದೆ. ಮೊದಲು ನನ್ನ ಅತಿಥಿ ಸತ್ಕಾರವನ್ನು ಸ್ವೀಕರಿಸಬೇಕು— ಎನ್ನುತ್ತ ತನ್ನ ನಿವಾಸಕ್ಕೆ ಕರೆದೊಯ್ದಳು. ಆ ಆವಾರದೊಳಗಿನ ತರು ಗಳ ಕೆಳಗೆ ಭಿಕ್ಷಾಪಾತ್ರೆಯನ್ನು ಒಡ್ಡುತ್ತಲೇ ಮರದಿಂದ ಸವಿ ಸವಿ ಹಣ್ಣುಗಳು ತಾವಾಗಿಯೇ ಅದರಲ್ಲಿ ಬೀಳುತ್ತಿದ್ದುವು !

ಚಂದ್ರಾಪೀಡ ಮತ್ತಿಷ್ಟು ಅಚ್ಚರಿಗೊಂಡ. ಆ ಪೂಜ್ಯಳನ್ನು ಪವಿತ್ರ ದೃಷ್ಟಿಯಿಂದ ನೋಡತೊಡಗಿದ. ಆ ಸಾಧ್ವಿ ಇನಿವಣ್ಣುಗಳನ್ನು ತಟ್ಟೆ ಯಲ್ಲಿ ತುಂಬಿ ತಂದಿಟ್ಟಳು; ಇವುಗಳನ್ನು ಸೇವಿಸಬೇಕು, ಎಂದು ಬಿನ್ನವಿಸಿದಳು.

ಚಂದ್ರಾಪೀಡನ ಹಸಿವು ಶಾಂತವಾಯಿತು. ಬಳಿಕ ಆ ದೇವಕನ್ಯೆ ತಾವು ಯಾರು, ಇಲ್ಲಿಗೇಕೆ ಬಂದಿರಿ.... ಮುಂತಾಗಿ ಕೇಳಿದಳು. ಚಂದ್ರಾಪೀಡ ತನ್ನ ಸರ್ವ ವೃತ್ತಾಂತವನ್ನು ವಿನಯಪೂರ್ಣ ಮಧುರ ವಾಣಿಯಿಂದ ನಿವೇದಿಸಿದ. ಆತನ ಸೌಜನ್ಯದಿಂದ ಆಕೆಯಲ್ಲಿ ಆತ್ಮೀ ಯತೆ ತಲೆಯೆತ್ತಿತು.

ಅಷ್ಟರಲ್ಲಿ ಚಂದ್ರಾಪೀಡ– ದೇವಿ, ತಾವು ದೇವಕನ್ನಿಕೆಯರೋ ಋಷಿಕನ್ನಿಕೆಯರೋ ? ಈ ಉಕ್ಕು ಹರಯದಲ್ಲಿ ಉಗ್ರ ತಪಸ್ಸಿಗೆ ಕಾರಣವೇನು? ತಮ್ಮ ಸಕಲ ಸ್ವಭಾವದಿಂದ ಉತ್ತೇಜಿತನಾಗಿ ಕೇಳು ತ್ತಿದ್ದೇನೆ, ಕ್ಷಮಿಸಬೇಕು– ಎಂದು ವಿನಂತಿಸಿದ.

ಮಹಾಶ್ವೇತೆ ಕೂಡಲೇ ಮಾತಾಡಲಿಲ್ಲ; ನಿಟ್ಟುಸಿರು ಬಿಟ್ಟು ಅಳ ಹತ್ತಿದಳು.

ಚಂದ್ರಾಪೀಡನ ಎದೆಗೆ ಬರೆಕೊಟ್ಟಂತಾಯಿತು. ಕ್ಷಮಿಸಬೇಕು.

ತಾಯಿ; ದುಃಖ ಯಾರನ್ನೂ ಬಿಟ್ಟಿಲ್ಲ. ದಯವಿಟ್ಟು ನಿಮ್ಮ ಕರುಣ ಕತೆಯನ್ನು ಹೇಳಿರಿ. ಅದರಿಂದ ನಿಮ್ಮ ದುಃಖಭಾರವೂ ಕಡಿಮೆ ಆದೀತು– ಎಂದು ಮತ್ತೆ ಬೇಡಿಕೊಂಡ.

—

## ೭. ಮಹಾಶ್ವೇತೆಯ ದೈವದುರಂತ

ಮಹಾಶ್ವೇತೆ ಹೇಳತೊಡಗಿದಳು– ರಾಜಕುಮಾರಾ, ಈ ಹತಭಾಗಿನಿಯ ಕತೆಯನ್ನು ಏನೆಂದು ಹೇಳಲಿ ? ಆದರೂ ಹೇಳುವೆ. ಕೇಳು: ದೇವಲೋಕದ ಅಪ್ಸರರ ಜಾತಿಯಲ್ಲಿ ಹದಿನಾಲ್ಕು ಕುಲಗಳಿವೆ. ಹದಿನಾಲ್ಕನೆಯ ವಂಶದಲ್ಲಿ **ಹಂಸ** ಎಂಬ ಗಂಧರ್ವ-ರಾಜನಿಗೆ ಅಪ್ಸರೆ **ಗೌರೀದೇವಿ** ಮಮತೆಯ ಮಡದಿ. ಈ ಮೆಚ್ಚಿನ ದಂಪತಿಗಳಿಗೆ ನಾನೊಬ್ಬಳೇ ಮಗಳು. ನನ್ನ ಹೆಸರು **ಮಹಾಶ್ವೇತೆ.** ಮೈ ಬಣ್ಣಕ್ಕೆ ಒಪ್ಪುವಂತೆ ಈ ಹೆಸರನ್ನು ಇಟ್ಟಿದ್ದರೋ ಏನೋ.

ಎಳೆತನದಲ್ಲಿ ಎಲ್ಲರಿಗೂ ಮುದ್ದಾಗಿ ಬೆಳೆದೆ; ಶೈಶವಾವಸ್ಥೆಯನ್ನು ಸಂತೋಷದಲ್ಲಿಯೇ ಕಳೆದೆ. ಆ ಮೇಲೆ ನನಗೆ ನವತಾರುಣ್ಯ ತಲೆದೋರಿತು. ವಸಂತ ಮಾಸದ ಒಂದು ದಿನ, ತಾಯಿಯೊಡನೆ ಅಚ್ಛೋದ ಸರೋವರಕ್ಕೆ ಸ್ನಾನ ಮಾಡಲು ಹೋಗಿದ್ದೆ. ಆಗ ವನಲಕ್ಷ್ಮಿಯ ಚೆಲುವನ್ನು ಬಣ್ಣಿಸುತ್ತ ಹೂಗೊಳದ ದಂಡೆಯ ಮೇಲೆ ಆಡ್ತಾಡುತ್ತಿದ್ದೆ. ಅಷ್ಟರಲ್ಲಿ, ನಾಸಾಪುಟವನ್ನು ತಣಿಸುವ ಮತ್ತು ಮರ್ತ್ಯಲೋಕದಲ್ಲಿ ಅಲಭ್ಯವೆನಬಹುದಾದ ಸೌರಭ ಗಾಳಿಯಲ್ಲಿ ತೇಲಿಬಂದಿತು. ನಾನು ಭ್ರಾಂತಳಾಗಿ ಗಾಳಿಯ ದಿಕ್ಕನ್ನು ಹಿಡಿದು ಓಡಿದೆ. ನನ್ನ ನೂಪುರ ರವಕ್ಕೆ ನಾಚಿದುವೋ ಬೆದರಿದುವೋ ! ಹಂಸಗಳೆಲ್ಲ ಸರೋವರವನ್ನು ಸೇರಿದುವು. ನಾನು ತುಸು ದೂರ ಹೋಗಿರಬಹುದು; ಅಷ್ಟರಲ್ಲಿ ಇದಿರಿಗೆ ಸ್ನಾನಕ್ಕಾಗಿ ಬರುವ ಮದನ ರೂಪದ ಮುನಿಕುಮಾರನನ್ನು ಕಂಡೆ !

ಆ ಮುನಿಕುಮಾರನ ತೇಜಸ್ಸು ಅಗ್ನಿಜ್ವಾಲೆಯಿಂದ ಸುತ್ತುವರಿ

ದಂತೆ ಲಕಲಕಿಸುತ್ತಿತ್ತು. ಆತನ ಚಿನ್ನದ ಕಾಯಕಾಂತಿಯಿಂದ ವನವೆಲ್ಲ ಹಳದಿ ಬಣ್ಣಕ್ಕೆ ತಿರುಗಿತ್ತು. ಆತನ ಭಸ್ಮತಿಲಕ ಪುಣ್ಯದ ಪತಾಕೆಯಂತೆ ತೋರುತ್ತಿತ್ತು. ಮೊಗಮೀಸೆಗಳು ಬಾರದಿದ್ದ ಆತನ ಮುಖ ಮರಿದುಂಬಿಗಳೆರಗಿದ ಕನಕ ಕಮಲದಂತೆ ಕಮನೀಯವಾಗಿತ್ತು.

ಆ ಮುನಿಕುಮಾರನ ಕಿವಿಯ ಮೇಲೆ ಕುಸುಮ ಮಂಜರಿಯಿತ್ತು. ಅಂತಹ ಅಪೂರ್ವ ಕುಸುಮವನ್ನು ನಾನೆಂದೂ ನೋಡಿರಲಿಲ್ಲ. ಅದನ್ನು ಎವೆಯಿಕ್ಕದೆ ನೋಡುತ್ತಲೇ ಮೈಮರೆತೆ; ಕಾಮದೇವನ ಕೈಗೊಂಬೆಯಾದೆ....

ತುಸುಹೊತ್ತಿನ ಮೇಲೆ ನನ್ನಷ್ಟಕ್ಕೆ ನಾನೇ ವಿಚಾರ ಮಾಡಿದೆ:

ಆ ಮುನಿಕುಮಾರನೆತ್ತ ? ಅಂತಹನನ್ನು ಕಾಮಿಸಿದ ನನ್ನ ಪಾಮರತನವೆತ್ತ ? ಆತನಿಗೆ ನನ್ನ ಸ್ಥಿತಿ ತಿಳಿಯುವ ಮೊದಲೇ ಅಲ್ಲಿಂದ ಅಗಲಬೇಕೆನಿಸಿತು. ಆದರೆ ಆತನ ಮೇಲೆ ಕೂಡ ಕಾಮ ಕೂರಂಬುಗಳನ್ನು ಎಸೆದಿದ್ದ. ನನ್ನನ್ನು ಕಾಣುವುದಕ್ಕಾಗಿ ಆತನೇ ನನ್ನ ಕಡೆಗೆ ಬರುತ್ತಿದ್ದ. ಆತನ ಕೈಯಲ್ಲಿಯ ಅಕ್ಷಮಾಲೆ ನಡುಗುತ್ತಿತ್ತು. ಮೈ ಬೆವೆತಿತ್ತು. ನನ್ನ ಕಡೆಗೆ ಕಣ್ಣರಳಿಸಿ ನೋಡುತ್ತಿದ್ದ. ಆಗ ನಾನು ಮತ್ತಿಷ್ಟು ಕಾಮನ ಕೈಸೆರೆಯಾದೆ.

ಆ ಮೇಲೆ ಆತನ ಸಂಗಡಿಗ ಮುನಿಕುಮಾರನನ್ನು ಸಂಧಿಸಿದೆ; ಮತ್ತು– ಈ ಮುನಿಕುಮಾರ ಯಾರು ? ಈತನ ತಾಯ್ತಂದೆಗಳ ಹೆಸರೇನು ? ಈತನಿಗೆ ಈ ಸುರಭಿಗುಚ್ಛ ಎಲ್ಲಿಂದ ದೊರೆಯಿತು ?.... ಮುಂತಾಗಿ ಕೇಳಿದೆ.

“ತರುಣೀ, ಇದರಿಂದ ನಿನಗೇನು ಉಪಯೋಗ ? ಆದರೂ ಉತ್ಸುಕತೆಯಿದ್ದರೆ ಕೇಳು” ಮುಗುಳು ನಗುತ್ತ ಮುಂದುವರಿದ. ದೇವಲೋಕದಲ್ಲಿ ಶ್ವೇತಕೇತು ಮಹಾಮುನಿಗಳಿದ್ದಾರೆ— ದೇವ–ದಾನವ ಸಿದ್ಧ, ವಿದ್ಯಾಧರರೆಲ್ಲರೂ ಅವರನ್ನು ವಂದಿಸುತ್ತಾರೆ. ಕಮಲನಿವಾಸಿನಿ ಲಕ್ಷ್ಮಿ ಅವರ ರೂಪವನ್ನು ಮೋಹಿಸಿದಳು. ಕಟಾಕ್ಷಮಾತ್ರದಿಂದಲೇ

ಈ ಕುಮಾರನ ಉತ್ಪತ್ತಿ ಆಯಿತು. ಈತನ ಹೆಸರು **ಪುಂಡರೀಕ.** ತಂದೆಯವರೇ ಈತನಿಗೆ ಸಕಲ ಶಾಸ್ತ್ರಗಳ ಅಭ್ಯಾಸ ಮಾಡಿಸಿದ್ದಾರೆ. ಈಗ ಈತ ನಿಷ್ಠಾವಂತ ಬ್ರಹ್ಮಚರ್ಯಾಶ್ರಮದಲ್ಲಿ ಇದ್ದಾನೆ........ಆತನ ಕಿವಿಯ ಮೇಲಿರುವುದು ದೇವಲೋಕದ ಪಾರಿಜಾತ ಕುಸುಮ ಮಂಜರಿ. ಸ್ವಯಂ ವನದೇವಿಯೇ ಅದನ್ನು ಈತನಿಗೆ ಅರ್ಪಿಸಿದ್ದಾಳೆ.

ಅಷ್ಟರಲ್ಲಿ ಪುಂಡರೀಕನೇ ನಸುನಗುತ್ತ— ಕುತೂಹಲಿನೀ, ನಿನಗೆ ಈ ಮಂಜರಿ ಬೇಕಾಗಿದ್ದರೆ ತೆಗೆದುಕೋ— ಎನ್ನುತ್ತ ಅದನ್ನು ತನ್ನ ಕೋಮಲ ಕರಗಳಿಂದ ನನ್ನ ಕಿವಿಯ ಮೇಲೆ ಇಟ್ಟ. ಆ ಕರಸ್ಪರ್ಶ ದಿಂದ ಮೈಯೆಲ್ಲ ರೋಮಾಂಚಿತವಾಯಿತು. ನನ್ನ ಗಲ್ಲವನ್ನು ಮುಟ್ಟಿ ದುದರಿಂದ ಅವನೂ ಮೋಹದ ಬಲಿಗೆ ಬಿದ್ದ. ಆತನ ಕೈನಡುಗಿ ಜಪಮಾಲೆ ನೆಲಕ್ಕೆ ಬೀಳುತ್ತಿತ್ತು. ನಾನು ಕೂಡಲೆ ಕೈಚಾಚಿ ಅದನ್ನು ತೆಗೆದುಕೊಂಡೆ; ನನ್ನ ಕೊರಳಲ್ಲಿ ಹಾಕಿಕೊಂಡೆ.

ನಮ್ಮಿಬ್ಬರ ವಿಚಾರಗಳು ದಾಸಿಯರಿಗೆ ತಿಳಿಯದೆ ಇರಲಿಲ್ಲ. ಒಬ್ಬಳು— ಗಂಧರ್ವ ರಾಜಕುಮಾರೀ, ತಾಯಿಯವರ ಸ್ನಾನ ಮುಗಿ ದಿರಬಹುದು; ತಡವಾಗುತ್ತಿದೆ. ನಾವೂ ಸರೋವರಕ್ಕೆ ಹೋಗುವಾ– ಎಂದು ನನ್ನನ್ನು ಚುಚ್ಚಿದಳು.

ಆತನನ್ನು ಬಿಟ್ಟು ನನ್ನ ಕಾಲುಗಳೂ ಕಣ್ಣುಗಳೂ ಬೇರೆ ಕಡೆಗೆ ತಿರುಗದಂತೆ ಆಗಿದ್ದುವು. ಎಷ್ಟೋ ಕಷ್ಟದಿಂದ ಸರೋವರದ ದಾರಿ ಯನ್ನು ಹಿಡಿದೆ. ನಾನು ತಿರುಗಿದುದು ತಿಳಿಯುತ್ತಲೇ ಮುನಿಕುಮಾರ ಹೌಹಾರಿ ನಿಂತ. ಆತನ ಗೆಳೆಯ ಹುಸಿ ಮುನಿಸಿನಿಂದ—

ಪುಂಡರೀಕಾ, ಏನಿದು ? ಹೀನಮಾನವರ ಮಾರ್ಗವನ್ನು ಹಿಡಿ ಯುತ್ತಿರುವೆಯಲ್ಲ ? ಸಾಧುಗಳಿಗೆ ಇದು ತಕ್ಕುದಲ್ಲ. ಇಂದು ಈ ಇಂದ್ರಿಯ ವಿಕಾರಕ್ಕೆ ವಶನಾದೆಯೇಕೆ ? ನಿನ್ನ ಇಂದ್ರಿಯ ನಿಗ್ರಹ, ಧೈರ್ಯಗಳು ಎಲ್ಲಿ ಹೋದುವು ? ಬ್ರಹ್ಮಚರ್ಯ, ಗುರುಗಳ ಉಪದೇಶ, ವೈರಾಗ್ಯ–ತಪಸ್ಸುಗಳು ಎತ್ತ ಮಾಯವಾದುವು ? ನಿನ್ನಂತಹ ನಿಗ್ರಹಿ ಗಳು, ಇಷ್ಟು ಪರವಶರಾಗಬೇಕೇ ? ಕೈಯೊಳಗಿನ ಜಪಮಾಲೆ ಸರಿದು

ಬಿದ್ದರೂ ಅರಿವಾಗಲಿಲ್ಲವೇ? ಅವಳು ಆ ಜಪಮಾಲೆಯನ್ನು ಒಯ್ದರೆ ಒಯ್ಯಲಿ; ಈಗ ನಿನ್ನನ್ನು ಸೆಳೆಯುತ್ತಾಳೆ. ಜೋಕೆ— ಎಂದು ಮುಂತಾಗಿ ಎಚ್ಚರಿಸಿದ.

ಪುಂಡರೀಕನಿಗೆ ನಾಚಿಕೆಯಾಯಿತು. ಸಾವರಿಸಿಗೊಂಡು ಹೇಳಿದ- ಮಿತ್ರಾ ಕಪಿಂಜಲಾ, ನನ್ನ ಬಗೆಗೆ ತಪ್ಪು ತಿಳಿಯಬೇಡ. ಆ ತಾಳ ತಪ್ಪಿದ ಹೆಣ್ಣಿನ ತಪ್ಪನ್ನು ನಾನು ಎಂದೂ ಕ್ಷಮಿಸಲಾರೆ....... ಎಂದು ಸುಳ್ಳು ಕೋಪವನ್ನು ನಟಿಸುತ್ತ— ಎಲೆ ಚಪಲೇ, ನನ್ನ ಜಪಮಾಲೆ ಯನ್ನು ಕೊಡದೆ ಒಂದು ಹೆಜ್ಜೆಯನ್ನು ಕೂಡ ಮುಂದಿಡಕೂಡದು— ಎಂದು ಗದ್ದರಿಸಿದ.

ನಾನು ಆ ಕೂಡಲೆ ನನ್ನ ಏಕಾವಳೀ ಸರವನ್ನು ಆತನ ಕೈಗಿತ್ತು ಸ್ನಾನಕ್ಕಾಗಿ ಹೊರಟು ಹೋದೆ. ಸ್ನಾನ ಮುಗಿಯಿತು. ಮುನಿ ಕುಮಾರನನ್ನೇ ಮನದಲ್ಲಿ ನೆನೆಯುತ್ತ ತಾಯಿಯೊಡನೆ ಹೆಜ್ಜೆ ಹಾಕ ಹತ್ತಿದೆ.

ಕನ್ಯಾಂತಃಪುರವನ್ನು ಸೇರಿದ ಮೇಲೆ ನನ್ನ ಅವಸ್ಥೆ ಏನಾಯಿತೆಂದು ಹೇಳಲಿ? ನನ್ನ ಅರಿವು ನನಗೇ ಇಲ್ಲದಾಯಿತು. ಎಲ್ಲಿದ್ದೇನೆ, ಏನು ಮಾಡುತ್ತಿದ್ದೇನೆ.... ಇದಾವುದೂ ತಿಳಿಯದಾಯಿತು. ಕೊನೆಗೆ ಒಂಟಿಗಿತಿಯಾಗಿ ಉಪ್ಪರಿಗೆಯನ್ನು ಏರಿದೆ; ಆ ಮುನಿಕುಮಾರನಿರುವ ಸ್ಥಳದ ಕಡೆಗೆ ನೋಟವನ್ನಿಟ್ಟು ನಿಂತುಬಿಟ್ಟೆ.

ಅಷ್ಟರಲ್ಲಿ ತರಲಿಕೆ ಎಂಬ ನನ್ನ ದಾಸಿ ಬಂದಳು– ಒಡತೀ, ಸರೋ ವರದ ದಂಡೆಯ ಮೇಲೆ ನಿನಗೆ ಕುಸುಮ ಮಂಜರಿಯನ್ನು ಕೊಟ್ಟ ಮುನಿಕುಮಾರ ಗೆಳೆಯರ ಕಣ್ಣು ತಪ್ಪಿಸಿ ನನ್ನನ್ನು ಗುಟ್ಟಾಗಿ ಕಂಡ; ಆ ಕನ್ನಿಕೆ ಯಾರು, ಅವಳ ಹೆಸರೇನು, ಎಲ್ಲಿರುತ್ತಾಳೆ? ಮುಂತಾಗಿ ಕೇಳಿದ.

ಅದಕ್ಕೆ ಉತ್ತರವಾಗಿ– ಪೂಜ್ಯರೇ, ಗಂಧರ್ವರಾಜ ಹಂಸ ಮತ್ತು ಅಪ್ಸರಾ ಗೌರೀದೇವಿಯರ ಮಗಳು. ಹೆಸರು ಮಹಾಶ್ವೇತೆ. ಗಂಧರ್ವ ನಿವಾಸವಾದ ಹೇಮಕೂಟದಲ್ಲಿ ಇರುತ್ತಾಳೆ.... ಎಂದು ಹೇಳಿದೆ.

ಮುನಿಕುಮಾರ ತುಸು ಹೊತ್ತು ತಣ್ಣನೆ ನಿಂತ. ಬಳಿಕ ಮಿದು ದನಿಯಿಂದ ಬೇಡಿಕೊಂಡ— ಬಾಲೇ, ನೀನು ನಿಷ್ಕಪಟೆಯಾಗಿ ತೋರುವಿ. ನನ್ನದೊಂದು ಕೆಲಸವನ್ನು ಮಾಡುವೆಯಾ ?

"ಅಪ್ಪಣೆ ಕೊಡಿಸಬೇಕು ಸ್ವಾಮಿ. ತಾವು ನನ್ನ ಮೇಲೆ ಕೃಪೆ ಮಾಡಿದಿರೆಂದೇ ಭಾವಿಸುತ್ತೇನೆ" ಎಂದು ಮರುಮಾತಾಡಿದೆ.

ಕೂಡಲೆ ಆತನು ಹತ್ತಿರದಲ್ಲಿದ್ದ ತಮಾಲ ವೃಕ್ಷದ ಎಲೆಯನ್ನು ಹರಿದ; ಕಲ್ಲಿನಿಂದ ಜಜ್ಜಿ ಅದರ ರಸವನ್ನು ತೆಗೆದ. ಬಳಿಕ ತನ್ನ ಉತ್ತರೀಯದ ಸೆರಗನ್ನು ಹರಿದು ಅದರ ಮೇಲೆ, ತಮಾಲ ರಸದಲ್ಲಿ ಕಿರಿಬೆರಳನ್ನು ಎದ್ದಿ, ಏನನ್ನೋ ಬರೆದುಕೊಟ್ಟ. ದಯವಿಟ್ಟು ಇದನ್ನು ನಿನ್ನ ಒಡತಿಗೆ ಕೊಡು ಎಂದು ಬಿನ್ನಯಿಸಿದ....

ಹೇಳಹೇಳುತ್ತ ತರಲಿಕೆ ತಾಂಬೂಲದ ಕರಡಿಗಿಯೊಳಗಿಂದ ಆ ಸಂದೇಶ ವಸ್ತ್ರವನ್ನು ನನ್ನ ಕೈಗೆ ಕೊಟ್ಟಳು. ಅದರಲ್ಲಿ—

ಮೃಣಾಲವೆಂದು ಮುತ್ತಿನ ಮಾಲೆಯನ್ನು ತೋರಿಸಿ ಹಂಸವನ್ನು ಹಾರಿಸಿಕೊಂಡು ಹೋಗುವಂತೆ, ನಿನ್ನ ಏಕಾವಲೀ ಸರವನ್ನು ಮುಂದೆ ಮಾಡಿ ನನ್ನ ಮಾನಸ ಹಂಸವನ್ನು ಹರಣ ಮಾಡಿರುವಿ.

ಸಂದೇಶವನ್ನು ಓದುತ್ತಲೇ ನನ್ನ ಮನಸ್ಸು ಮತ್ತಿಷ್ಟು ವಿಕಾರಕ್ಕೆ ಒಳಗಾಯಿತು. ಮುನಿಕುಮಾರನೊಡನೆ ಮಾತನಾಡಿದ ನನ್ನ ದಾಸಿ ಆ ಕ್ಷಣದಿಂದಲೇ ನನ್ನ ಜೀವದ ಗೆಳತಿಯಾದಳು. ಅವಳ ಮುಂಗುರುಳನ್ನು ನೇವರಿಸಿ, ಮತ್ತೆ ಮತ್ತೆ ಆ ಮದನ ರೂಪನ ಮಾತುಕತೆಗಳನ್ನು ಕೇಳಿಕೊಂಡೆ.

ಸಂಜೆಯಾಯಿತು. ನಾನು ಉಪ್ಪರಿಗೆಯ ಮೇಲೆಯೇ ಇದ್ದೆ. ಆಗ ದಾಸಿಯೊಬ್ಬಳು ಬಂದು– ತಾಯೀ, ಜಪಮಾಲೆಯನ್ನು ಬೇಡಲು ಒಬ್ಬ ಮುನಿಕುಮಾರ ಬಂದಿದ್ದಾನೆ– ಎಂದು ಹೇಳಿದಳು.

ನನ್ನ ಮನದನ್ನನೇ ಬಂದನೇನೋ ಎಂಬ ಆತುರದಿಂದ ಆತನನ್ನು ಒಳಕ್ಕೆ ಬರಮಾಡಿಕೊಂಡೆ; ಉಚಿತ ಆಸನದಲ್ಲಿ ಕುಳ್ಳಿರಿಸಿ, ಬೇಡ ಬೇಡವೆಂದರೂ ಆತನ ಪಾದಪೂಜೆ ಮಾಡಿದೆ. ಸ್ವಾಮೀ, ಈಕೆ ನನ್ನ

ಜೀವದ ಗೆಳತಿ. ಸಂಕೋಚವಿಲ್ಲದೆ ಮಾತಾಡಬಹುದು, ಎಂದು ಬಿನ್ನವಿಸಿದೆ.

ಆಗ ಆಗಂತುಕ ಮುನಿಕುಮಾರ– ತಾಯೀ, ಏನು ಹೇಳಲಿ ? ತಪೋನಿಷ್ಠರು ಕೂಡ ಕಾಮವಿಕಾರಕ್ಕೆ ಒಳಗಾಗುವುದು ದೈವ ಲೀಲೆಯೇ ಅಲ್ಲವೇ ? ಪ್ರಾಣಗಳನ್ನು ಬಲಿಕೊಟ್ಟಾದರೂ ಮಿತ್ರರನ್ನು ಬದುಕಿಸಬೇಕು, ಎಂದು ನೀತಿಶಾಸ್ತ್ರವಿದೆ. ಅದಕ್ಕಾಗಿ ನಾಚಿಕೆ ಬಿಟ್ಟು ಹೇಳುತ್ತೇನೆ.

ನೀನು ಹೋದ ತುಸು ಹೊತ್ತಿನಲ್ಲಿ ನನ್ನ ಮಿತ್ರನೂ ನನ್ನ ಕಣ್ಮರೆಯಾದ. ನನ್ನ ಮೇಲೆ ಸಿಟ್ಟಾಗಿ ಹೋದನೋ, ಇಲ್ಲವೆ ಜೀವಕ್ಕೇನಾದರೂ ಅಪಾಯ ಮಾಡಿಕೊಂಡನೋ ಎಂದು ಅತ್ತಿತ್ತ ಹುಡುಕಾಡಿದೆ. ಕೊನೆಗೆ, ಮಲ್ಲಿಗೆಯ ಮಂಟಪದ ಹತ್ತಿರ ಗರಹೊಡೆದವರಂತೆ ಕುಳಿತುದನ್ನು ಕಂಡೆ. ಅಂತಹ ವೀರವಿರಾಗಿಯನ್ನು ಕೂಡ ಹೂ-ಗೋಲುಗಳ ಹೊಡೆತದಿಂದ ಹುಚ್ಚನನ್ನಾಗಿ ಮಾಡಿದ ಕಾಮನ ಕಿಚ್ಚಿಗೆ ಬೆರಳು ಕಚ್ಚಿದೆ. ಗೆಳೆಯನ ಕರುಣಜನಕ ಸ್ಥಿತಿ ನನ್ನ ಕರುಳನ್ನು ಕೊರೆಯಿತು. ಪುಂಡರೀಕಾ ನಿನಗೇನಾಯಿತು ? ನನ್ನನ್ನು ಕಣ್ಣೆತ್ತಿ ಕೂಡ ನೋಡಲಾರೆಯಾ ? ಎಂದು ಕರುಳಿನ ನುಡಿಗಳನ್ನು ನುಡಿದೆ.

ಅವನು ನಿಟ್ಟುಸಿರು ಬಿಡುತ್ತ— ಕಪಿಂಜಲಾ, ಎಲ್ಲವನ್ನು ತಿಳಿದೂ ತಿಳಿದೂ ಕೇಳಿದರೆ ಏನು ಹೇಳಲಿ ? ಕಾಮನ ಕೂರಂಬಿನ ಗಾಳಿಯಿಂದ ನನ್ನ ಸದಸದ್ವಿವೇಕವೆಲ್ಲ ಹಾರಿಹೋಗಿದೆ. ಜೀವ ಮಾತ್ರ ಉಳಿದಿದೆ. ಇನ್ನು ತುಸು ತಡೆದರೆ ಅದೂ ಹೋಗುತ್ತಿದೆ, ಹೇಳ ಹೇಳುತ್ತ ಕಣ್ಣೀರು ಕರೆಯತೊಡಗಿದ.

ತಾಯಿ, ನನ್ನ ಗೆಳೆಯನನ್ನು ಉಳಿಸುವುದೂ ಅಳಿಸುವುದೂ ನಿನ್ನ ಕೈಯಲ್ಲಿದೆ. ಅವನಿಗೆ ತಿಳಿಸದಂತೆ ಓಡೋಡುತ್ತ ಬಂದಿರುವೆ. ಇಷ್ಟರೊಳಗೆ ಏನಾಗಿದೆಯೋ ! ಬೇಗನೆ ಹೋಗಬೇಕು— ಎನ್ನುತ್ತ ನನ್ನ ಮೋರೆಯನ್ನು ನೋಡತೊಡಗಿದ.

ಯುವರಾಜಾ, ಪ್ರಿಯನ ಕಷ್ಟದ ವಾರ್ತೆಯನ್ನು ಕೇಳುತ್ತಿದ್ದರೂ

ನನ್ನ ಇಷ್ಟಾರ್ಥ ಈಡೇರಿತಲ್ಲ, ಎಂದು ಆನಂದಪಟ್ಟೆ. ಅಷ್ಟರಲ್ಲಿ ನನ್ನ ತಾಯಿ ಬಂದಳು. ಕಪಿಂಜಲ ಗೆಳೆಯನನ್ನು ನೋಡುವ ಆತುರದಿಂದ ಮೆತ್ತಗೆ ನುಸುಳಿದ.

ಆ ಸಮಯದಲ್ಲಿ ತಾಯಿ ಏನೇನೋ ಹೇಳಿದಳು. ನನಗೆ ಯಾವುದೂ ನೆನಪಿಲ್ಲ. ಆಕೆ ಹೋದಮೇಲೆ, ತರಲಿಕೆಗೆ ನನ್ನ ಮನೋರಮಣನ ದುಃಸ್ಥಿತಿಯನ್ನು ನನ್ನ ಮನಸ್ಸಿನ ಚಂಚಲತೆಯನ್ನು ಕಪಿಂಜಲ ಹೇಳಿದ ವಿವರಗಳನ್ನೂ ಸೂಕ್ಷ್ಮವಾಗಿ ತಿಳಿಸಿದೆ. ಅವಳು, ಪ್ರಿಯನಿದ್ದಲ್ಲಿಗೆ ಹೋಗುವುದೊಂದೇ ಈಗ ಉಳಿದಿರುವ ಉಪಾಯ, ಎಂಬುದನ್ನು ನಿಚ್ಚಳವಾಗಿ ಹೇಳಿದಳು. ನನಗೂ ಅದೇ ಬೇಕಾಗಿತ್ತು. ತಟ್ಟನೆ ಅವಳ ಕೈಹಿಡಿದು ಎದ್ದೆ. ಅದೇಕೋ ಬಲಗಣ್ಣು ಹಾರಿತು! ಮುಂದೇನು ಆಪತ್ತು ಕಾದಿದೆಯೋ, ಎಂದು ಎದೆ ಬಡಕೊಳ್ಳ ಹತ್ತಿತು.

ಚಂದ್ರಬಿಂಬ ಮೇಲಕ್ಕೇರಿ ಹಾಲು ಹೊಳೆ ಹರಿಯುತ್ತಿತ್ತು. ನಾನು ಜಪ ಮಾಲೆಯನ್ನು ಹಾಕಿಕೊಂಡೆ, ಕುಸುಮ ಮಂಜರಿಯನ್ನು ಕಿವಿಗೇರಿಸಿದೆ, ಕೆಂಪು ಶಾಲನ್ನು ಹೊದೆದುಕೊಂಡು ಉಪ್ಪರಿಗೆಯನ್ನು ಇಳಿದೆ, ತರಲಿಕೆಯ ಸಂಗಡ ಪುಂಡರೀಕನಿದ್ದ ಪ್ರಮದ ವನದ ಹಾದಿಯನ್ನು ಹಿಡಿದೆ. ದಾರಿಯುದ್ದಕ್ಕೂ ಆ ಮದನ ಮನೋಹರನ ಮಾತನ್ನೇ ಆಡುತ್ತ ಸಾಗಿದ್ದೆವು.

ವನವನ್ನು ಸಮೀಪಿಸುತ್ತಿದ್ದಾಗ ಗಟ್ಟಿಯಾಗಿ ಅಳುವ ಗಂಡುಸಿನ ದನಿ ಕೇಳಿಬರತೊಡಗಿತು. ಮೊದಲೇ ಅಪಶಕುನದಿಂದ ಅಂಜಿದ ನನ್ನ ಕೈಕಾಲೇ ಹೋದುವು. ಹೇಗೋ ಓಡುತ್ತ ಓಡುತ್ತ ಅಲ್ಲಿಗೆ ಹೋದೆ. ಕಪಿಂಜಲ ಎದೆ ಎದೆ ಬಡಕೊಂಡು ಅಳುತ್ತಿದ್ದ.

'ಅಯ್ಯೋ! ಎಂಥ ಮೋಸವಾಯಿತಲ್ಲಾ! ದುರಾತ್ಮ ಕಾಮಾ, ಎಂಥ ಕಟುಕ ನೀನು? ಮಹಾಶ್ವೇತೇ, ನಿನಗೆ ನನ್ನ ಗೆಳೆಯ ಯಾವ ಅಪರಾಧವನ್ನು ಮಾಡಿದ್ದ? ಭಗವನ್ ಶ್ವೇತಕೇತೂ, ಇಂದು ನಿನ್ನ ಸರ್ವಸ್ವವೂ ನಾಶವಾಯಿತು. ಧರ್ಮವೇ ಇಂದು ನೀನು ನಿರಾ

ಶ್ರಯನಾದಿ. ತಪಸ್ಸೇ ನೀನು ಹಾಳಾಗಿ ಹೋದಿ. ಸರಸ್ವತಿಯೇ ವಿಧವೆಯಾದಿ. ಸುರಲೋಕವೇ ಶೂನ್ಯವಾದಿ. ಪ್ರಿಯ ಮಿತ್ರಾ, ನನ್ನನ್ನು ಬಿಟ್ಟು ನೀನೊಬ್ಬನೇ ಪರಲೋಕಕ್ಕೆ ಹೋದೆಯಾ ! ನಿನ್ನನ್ನ ಗಲಿ ನಾನು ಹೇಗೆ ಬದುಕಲಿ ! ಏಳು, ಏಳು ಗೆಳೆಯಾ, ನನ್ನ ಮಾತಿಗೆ ಉತ್ತರ ಕೊಡು. ಆ ಸಿನ್ನ ಮುಗುಳು ನಗೆಯ ಮೋರೆ ಯನ್ನು ಎಂದಿಗೆ ಕಾಣುವೆ ! ಅಯ್ಯೊ ಹಾಳಾದೆ, ಹಾಳಾದೆ !'

ಆ ಅಳುವನ್ನು ಕೇಳುತ್ತಲೇ ನನಗೂ ದುಃಖ ಒತ್ತರಿಸಿತು. ಪ್ರಿಯಾ, ಪ್ರಿಯಾ ಎನ್ನುತ್ತ ಓಡಿಹೋಗಿ ನೋಡುತ್ತೇನೆ— ಕಲ್ಲ ಹಾಸಿಗೆಯ ಮೇಲೆ ಕಮಲ-ಪತ್ರಗಳ ರಾಶಿಯಲ್ಲಿ ಪ್ರಿಯಕರ ಪವಡಿಸಿದ್ದಾನೆ. ಶ್ವಾಸವಿಲ್ಲ, ಅಂಗಾಂಗಗಳ ಚಲನೆಯಿಲ್ಲ. ಮದನ ತಾಪವನ್ನು ಶಾಂತ ಪಡಿಸಿ ಸುಖನಿದ್ರೆ ಮಾಡುವಂತೆ ಮಲಗಿದ್ದಾನೆ ! ಆತನ ಕೊರಳಲ್ಲಿ ನನ್ನ ಏಕಾವಳಿ ವಿಶ್ರಾಂತಿ ಪಡೆಯುತ್ತಿದೆ !

ನನ್ನನ್ನು ಕಾಣುತ್ತಲೇ ಕಪಿಂಜಲನ ಅಳು ಇಮ್ಮಡಿಸಿತು. ನನಗೂ ಮೂರ್ಛೆ ಬಂದು ಬಿದ್ದು ಬಿಟ್ಟೆ ! ಯಾವ ಪೂರ್ವಜನ್ಮದ ಪಾಪವೋ ! ಅದೇ ಮೂರ್ಛೆಯಲ್ಲಿಯೇ ನನ್ನ ಪ್ರಾಣಗಳು ಹಾರಿ ಹೋಗಲಿಲ್ಲ ! ತುಸು ಎಚ್ಚರಾಗುತ್ತಲೇ ಎದೆ ಎದೆ ಬಡಕೊಂಡು ಅಳಹತ್ತಿದೆ, ಪ್ರಿಯನ ಶವದ ಮೇಲೆ ಹೊರಳಾಡಿದೆ ! ನನ್ನ ಮನದನ್ನನನ್ನು ಬದುಕಿಸಿರಿ, ಎಂದು ಕಪಿಂಜಲನಿಗೆ ಕೈಮುಗಿದೆ; ದಾಸಿಗೆ ಬೇಡಿ ಕೊಂಡೆ ! ............

ಹೇಳ ಹೇಳುತ್ತಲೇ ಮಹಾಶ್ವೇತೆ ಮೂರ್ಛೆ ಹೋದಳು. ಚಂದ್ರಾ ಪೀಡ ಗಾಳಿ ಹಾಕಿ ಅವಳನ್ನು ಎಚ್ಚರಿಸಿದ. ತಾಯೀ, ನಿಮ್ಮ ಎದೆ ಗಾಯವನ್ನು ಕೆದರಿ ನಿಮಗೆ ಕಷ್ಟಕೊಟ್ಟೆ. ಈ ಪಾಪಾತ್ಮನನ್ನು ಕ್ಷಮಿಸಬೇಕು. ಇಲ್ಲಿಗೇ ಈ ಕತೆ ಮುಗಿಯಲಿ— ಎಂದು ಬೇಡಿ ಕೊಂಡ.

ಆಗ ಮಹಾಶ್ವೇತೆ— ರಾಜಕುಮಾರಾ, ನನಗಾಗಿ ಮರುಗಬೇಕಾ ಗಿಲ್ಲ. ನನ್ನ ಪ್ರಾಣಗಳು ಹೋಗುವುದಾಗಿದ್ದರೆ ಆ ಭಯಾನಕ

ರಾತ್ರಿಯಲ್ಲಿಯೇ ಹೋಗಬೇಕಾಗಿತ್ತು. ಈಗ ಈ ಕಲ್ಲೆದೆ ಯಾವ ಕಷ್ಟವನ್ನು ಸಹಿಸಬಲ್ಲದು. ಕೊನೆಯದಾಗಿ, ಈ ವರೆಗೆ ನಾನು ಬದುಕಿರುವುದರ ಕಾರಣವನ್ನು ಹೇಳುತ್ತೇನೆ:

ಆ ಮೇಲೆ, ಪ್ರಿಯನೊಡನೆ ಸತಿ ಹೋಗುವ ನಿಶ್ಚಯ ಮಾಡಿದೆ. ಅಗ್ನಿ ಕುಂಡವನ್ನು ಸಿದ್ಧಪಡಿಸಲು ತರಲಿಕೆಗೆ ಹೇಳಿದೆ. ಆ ಹೊತ್ತಿಗೆ ಗೌರವರ್ಣದ ದಿವ್ಯ ದೇಹಧಾರಿಯೊಬ್ಬ ಚಂದ್ರಮಂಡಲದಿಂದ ಭೂಮಿಗೆ ಬಂದ; ಪುಂಡರೀಕನ ದೇಹವನ್ನು ಎತ್ತಿಕೊಂಡ; ಮೇಲೆ ಹೋಗುತ್ತಿರುವಾಗ— ಮಗಳೇ, ಪ್ರಾಣತ್ಯಾಗದ ವಿಚಾರವನ್ನು ಬಿಟ್ಟುಬಿಡು. ಪುನಃ ನಿನ್ನ ಪ್ರಿಯನ ಸಮಾಗಮವಾಗುತ್ತಿದೆ— ಎಂದು ಹೇಳಿ ಕಣ್ಮರೆಯಾದ.

ಆ ಕೂಡಲೆ ಕಪಿಂಜಲ— ಎಲೆ ದುಷ್ಟಾ, ನನ್ನ ಗೆಳೆಯನನ್ನು ಎಲ್ಲಿಗೆ ಒಯ್ಯುತ್ತೀ, ನಿಲ್ಲು— ಎನ್ನುತ್ತ ಆಕಾಶದಲ್ಲಿ ಉಡ್ಡಾಣ ಮಾಡಿಬಿಟ್ಟ.

ನಾನು ಮುಂಗಾಣದೆ ಕಂಗೆಟ್ಟು ಕುಳಿತೆ. ಆಗ ತರಲಿಕೆ ರಾಜಕನ್ಯೇ, ಕನಸಿನಲ್ಲಿಯೂ ಕಾಣಲಾಗದ ಸೋಜಿಗಗಳನ್ನು ಕಂಡಂತಾಯಿತು. ಆ ದಿವ್ಯ ಪುರುಷನ ನುಡಿಯನ್ನು ನಂಬು. ಪ್ರಾಣತ್ಯಾಗದಿಂದ ಪ್ರಯೋಜನವಿಲ್ಲ. ಕಪಿಂಜಲನೂ ಆತನ ಹಿಂದೆಯೇ ಹೋಗಿದ್ದಾನೆ. ಅವನು ತಿರುಗಿ ಬಂದಮೇಲೆ ಏನೆಲ್ಲ ತಿಳಿಯುತ್ತಿದೆ. ಅಲ್ಲಿಯವರೆಗೂ ಬದುಕಿರು, ಎಂದು ದೀನವಾಣಿಯಿಂದ ಬೇಡಿಕೊಂಡಳು. ಅವಳ ಉಪದೇಶದಂತೆ ಬದುಕುವ ನಿರ್ಧಾರ ಮಾಡಿದೆ. ಆ ಇರುಳು ಬಲು ಕಷ್ಟದಿಂದ ಕಳೆಯಿತು.

ಮರುದಿನ ಬೆಳಗಿಗೆ ಅದೇ ಸರೋವರದಲ್ಲಿ ಸ್ನಾನಮಾಡಿದೆ; ಪುಂಡರೀಕನ ವಲ್ಕಲ, ಕಮಂಡಲು, ಜಪಮಾಲೆಗಳನ್ನು ತೆಗೆದುಕೊಂಡೆ; ಅಷ್ಟರಿಂದಲೇ ಸಂನ್ಯಾಸಿನಿಯಾದೆ. ಅಂದಿನಿಂದ ಈ ವರೆಗೂ ಪತಿತಪಾವನನಾದ ಪರಮೇಶ್ವರನನ್ನು ಧ್ಯಾನಿಸುತ್ತಿರುವೆ. ಈ ಪಾಪಾತ್ಮಳ ಕತೆ....!

ಪ್ರಿಯನ ನೆನಪಾದುದರಿಂದಲೋ ಏನೋ— ಮಹಾಶ್ವೇತೆ ಕಂಬನಿ ಗರೆಯುತ್ತ ಮೋರೆಗೆ ಸೆರಗನ್ನು ಮುಚ್ಚಿಕೊಂಡಳು.

ಚಂದ್ರಾಪೀಡ ಆಕೆಯ ದಿವ್ಯ ಚರಿತ್ರ ಕೇಳಿದ, ಅವಳೊಬ್ಬ ಮಹಾ ಮಹಿಮಳೆಂಬ ಪವಿತ್ರ ಭಾವನೆಯನ್ನು ತಳೆದ: ದೇವೀ, ಕಷ್ಟಕ್ಕಾಗಿ ಹೆದರುವ ಕೃತಘ್ನ ಜನರು ಸ್ನೇಹಿತರ ಸಂಕಟ ಕಾಲದಲ್ಲಿ ಸುಳ್ಳು ಸುಳ್ಳೇ ಕಂಬನಿಗಳನ್ನು ಮಾತ್ರ ಸುರಿಸುತ್ತಾರೆ; ಹೊರತಾಗಿ, ಆ ಸ್ನೇಹ ದಿಂದ ತತ್ಕಾಲಕ್ಕೇ ದೂರವಾಗಿ ಬಿಡುತ್ತಾರೆ. ಆದರೆ ನೀವು ಪ್ರಿಯನ ಮೇಲಿನ ನಿಶ್ಚಲ ಪ್ರೇಮಕ್ಕೆ ಸರಿಯಾಗಿ ಸ್ವರ್ಗಸುಖದ ತ್ಯಾಗವನ್ನು ಕೂಡ ಮಾಡಿದ್ದೀರಿ; ಆತನ ಪುನಃ ಪ್ರಾಪ್ತಿಗಾಗಿ ಪರಮೇಶ್ವರನ ನಿತ್ಯ ಸೇವೆಯನ್ನು ಸಾಗಿಸಿದ್ದೀರಿ; ನಿಷ್ಠಾವಂತ ಬ್ರಹ್ಮಚಾರಿಣಿಯಾಗಿ ವಿಷಯ ಸುಖಭೋಗದ ಸರ್ವ ವಸ್ತುಗಳನ್ನು ದೂರಮಾಡಿ ವಿರಾಗಿಣಿ ಯಾಗಿದ್ದೀರಿ. ಇದಕ್ಕಾಗಿ ತಂದೆ ತಾಯಿ ಬಂಧು ಬಳಗ ಮುಂತಾಗಿ ಎಲ್ಲರನ್ನು ತೊರೆದಿದ್ದೀರಿ. ಇಂತಹ ಸಾಧ್ವಿಯ ತಪಸ್ಸಿಗೆ ಮೆಚ್ಚಿ, ಯಾವ ದೇವನೂ ಸತ್ತ ಪತಿಯನ್ನು ಬದುಕಿಸಿಕೊಡಲೇಬೇಕು.... ಎಂದು ಮಹಾಶ್ವೇತೆಯನ್ನು ಸಂತಯಿಸಿದ.

—

## ೮. ಕಾದಂಬರಿಯ ಸುಖಸ್ಪರ್ಶ

ಸಂಜೆಯ ಮುಂದೆ ಮಹಾಶ್ವೇತೆ ನಿತ್ಯದಂತೆ ದೇವತಾರ್ಚನೆ ಮುಗಿಸಿದಳು. ಚಂದ್ರಾಪೀಡನೂ ಸಂಧ್ಯಾವಂದನೆಯನ್ನು ಪೂರಯಿ ಸಿದ. ಮಹಾಶ್ವೇತೆಯ ಬಗೆಗೆ ಇನ್ನೂ ಕೇಳಬೇಕೆಂದು ಆಸೆ ಅವನಿಗೆ. ಅದರಿಂದ ತಾಯಿ ನಿಮ್ಮ ಗೆಳತಿ **ತರಲಿಕೆ** ಎಲ್ಲಿದ್ದಾಳೆ?— ಎಂದು ಮಾತಿಗೆ ಆರಂಭಿಸಿದ.

"ಮಹಾಭಾಗ, ಅಪ್ಸರರಲ್ಲಿ ಅಮೃತದಿಂದ ಹುಟ್ಟಿದ ಒಂದು ಕುಲ ವಿದೆ. ಅದರಲ್ಲಿ **ಮದಿರಾ** ಹೆಸರಿನ ಅತಿ ಸುಂದರಿಯಾದ ಅಪ್ಸರೆ ಹುಟ್ಟಿದಳು. ಅವಳನ್ನು ಚಿತ್ರರಥ ಗಂಧರ್ವ ಮದುವೆಯಾದ.

ಅವರಿಗೆ **ಕಾದಂಬರಿ** ಎಂಬ ಮಗಳಾದಳು. ನಾನೂ ಕಾದಂಬರಿಯೂ ಅಚ್ಚುಮೆಚ್ಚಿನ ಗೆಳತಿಯರು. ಅವಳಿಗೆ ನನ್ನ ಈ ಪ್ರಣಯ ದುರಂತ ವಾರ್ತೆ ಮುಟ್ಟಿತು. ನನ್ನ ಬಗೆಗಿನ ನಿಷ್ಕಪಟ ಪ್ರೇಮದ ಪರಿಣಾಮ ವಾಗಿ— ಮಹಾಶ್ವೇತೆಯ ದುಃಖನಿವಾರಣೆ ಆಗುವ ವರೆಗೆ ನಾನೂ ಮದುವೆ ಮಾಡಿಕೊಳ್ಳುವುದಿಲ್ಲ– ಎಂದು ದೃಢಪ್ರತಿಜ್ಞೆ ಮಾಡಿದ್ದಾಳೆ.

ಹೀಗೆಯೇ ಕೆಲವು ಕಾಲ ಕಳೆಯಿತು. ವೈರಾಗ್ಯದಿಂದ ಮಗಳ ಯೌವನ ವ್ಯರ್ಥವಾಗುತ್ತಿದೆಯೆಲ್ಲ, ಎಂದು ತಾಯ್ತಂದೆಗಳು ಹಳ ಹಳಿಸಿದರು; ತಿಳಿಹೇಳಿದರು. ಆದರೂ ಕಾದಂಬರಿ ತನ್ನ ಮನಸ್ಸನ್ನು ಬದಲಿಸಲಿಲ್ಲ. ಆ ತಾಯ್ತಂದೆಗಳಿಗೆ ನನ್ನ ಮೇಲೆಯೂ ತುಂಬಾ ಮಮತೆಯಿದೆ. ನಮ್ಮ ಗೆಳೆತನದ ಆಳವನ್ನು ಅವರು ಬಲ್ಲರು. ಆದುದರಿಂದ, ಇಂದು ಬೆಳಗಿಗೆ ಕಂಚುಕಿಯನ್ನು ಕಳಿಸಿಕೊಟ್ಟದ್ದರು; ಕಾದಂಬರಿಯ ಕಲ್ಯಾಣ ಮಾಡುವ ಸರ್ವಭಾರ ನಿನ್ನ ಮೇಲೆಯೇ ಇದೆ. ಬಂದು ಹೋದರೆ ನೆಟ್ಟಗೆ, ಎಂದು ಅವನ ಕೈಯಿಂದ ಸಂದೇಶ ವನ್ನು ತಿಳಿಸಿದ್ದರು.

ನಾನು— ಕಾದಂಬರೀ, ತಾಯ್ತಂದೆಗಳ ಇಚ್ಛೆಯಂತೆ ನೀನು ಮದುವೆಯಾಗಬೇಕು. ನಿನ್ನ ವೈರಾಗ್ಯದಿಂದಾಗಿ, ಮೊದಲೇ ನೊಂದ ನನ್ನೆದೆಗೆ ಮತ್ತಿಷ್ಟು ಬಲವಾದ ಗಾಯವಾಗುತ್ತಿದೆ— ಎಂದು ಹೇಳಿ ತರಲಿಕೆಯನ್ನು ಕಳಿಸಿಕೊಟ್ಟರುವೆ. ಆಕೆ ಹೋದ ತುಸು ಹೊತ್ತಿ ನಲ್ಲಿಯೇ ನೀವು ಇಲ್ಲಿಗೆ ಆಗಮಿಸಿದಿರಿ........... ಎಂದು ತರಲಿಕೆಯ ವಿವರಗಳನ್ನು ತಿಳಿಸಿದಳು...........

ಮರುದಿನ ಪ್ರಭಾತದಲ್ಲಿ ಮಹಾಶ್ವೇತೆ ನಿತ್ಯದಂತೆ ಸ್ನಾನ–ಪೂಜಾದಿ ಗಳನ್ನು ಮುಗಿಸಿದಳು. ಚಂದ್ರಾಪೀಡನೂ ದೇವತಾರ್ಚನೆಯನ್ನು ತೀರಿಸಿಕೊಂಡ. ಆ ಹೊತ್ತಿಗೆ ತರಲಿಕೆ ಗಂಧರ್ವ ಕುಮಾರನೊಡನೆ ಅಲ್ಲಿಗೆ ಬಂದಳು. ಕಾದಂಬರಿ ಗೆಳತಿಯ ಸಂದೇಶವನ್ನು ಕೇಳಿ ಕಂಬನಿಗರೆದಳೆಂದೂ, ತಾನೊಂದು ಪ್ರತಿ ಸಂದೇಶವನ್ನು ಕಳಿಸಿದ್ದಾ ಳೆಂದೂ ತಿಳಿಸಿದಳು.

ಕಾದಂಬರಿಯ ವೀಣಾವಾಹಕನಾದ **ಕೇಯೂರಕ** ಪ್ರತಿ ಸಂದೇಶ ವನ್ನು ತಿಳಿಸಿದ— ಮಧುರ ಮಾತಿನ ಮಹಾಶ್ವೇತೆ, ಇಂತಹ ಕಟು ವಚನಗಳನ್ನು ಎಲ್ಲಿ, ಎಂದಿನಿಂದ ಕಲಿತಿ ? ಬಹುಶಃ ನನ್ನನ್ನು ಪರೀಕ್ಷಿಸುವುದಕ್ಕಾಗಿ ಹೀಗೆ ಸಂದೇಶವನ್ನು ಕಳಿಸಿದೆಯಾ ? ನಿನ್ನನ್ನು ನೋಡಲು ನಾನು ಬರಲಿಲ್ಲವೆಂದು ನನ್ನ ಮೇಲೆ ಸಿಟ್ಟಾಗಿಲ್ಲವಷ್ಟೇ. ನನ್ನ ಮದುವೆಯ ಮಾತನ್ನು ಮರೆತು ಬಿಡು. ನಾನು ಎಲ್ಲಿದ್ದರೂ ನನ್ನ ಪಂಚಪ್ರಾಣಗಳು ನಿನ್ನ ಸುತ್ತಲೇ ಸುಳಿಯುತ್ತಿರುತ್ತವೆ........

ಕಾದಂಬರಿಯ ಪ್ರತಿ ಉತ್ತರದಿಂದ ಮಹಾಶ್ವೇತೆಗೆ ಗೆಳತಿಯನ್ನು ಕಾಣುವ ಹಂಬಲು ಹುಟ್ಟಿತು. ನೀನು ಮುಂದೆ ಹೋಗು; ನಾವು ಈಗಲೇ ಅಲ್ಲಿಗೆ ಬರುತ್ತೇವೆ, ಎಂದು ಕೇಯೂರಕನನ್ನು ಕಳಿಸಿದಳು. ಕೇಯೂರಕ ಚಂದ್ರಾಪೀಡನ ಕಾಮರೂಪವನ್ನು ಹೊರಳಿ ಹೊರಳಿ ನೋಡುತ್ತ ಮುಂದಡಿಯಿಟ್ಟ.

ಬಳಿಕ ಮಹಾಶ್ವೇತೆ ಚಂದ್ರಾಪೀಡನನ್ನು ಕುರಿತು— ಮಹಾತ್ಮಾ, ಹೇಮಕೂಟ ಪರ್ವತ ಬಹಳ ರಮಣೀಯವಾಗಿದೆ. ಅಲ್ಲಿಯೇ ನನ್ನ ಪ್ರಿಯಸಖಿ ಕಾದಂಬರಿ ಇದ್ದಾಳೆ. ತಮ್ಮ ಸಮಾಗಮದಿಂದ ನನ್ನ ದುಃಖಭಾರ ಎಷ್ಟೋ ಕಡಮೆಯಾಗಿದೆ. ನಿಮ್ಮಿಂದ ನನ್ನ ಗೆಳತಿಯೂ ಸುಖಿಯಾಗುವಳೆಂದು ತಿಳಿದಿದ್ದೇನೆ. ನಿಮಗೆ ರಾಜಕಾರಣದ ಆತಂಕ ವಿಲ್ಲದಿದ್ದರೆ ನನ್ನೊಡನೆ ಬರುವಿರಾ ? —ಎಂದು ಬಿನ್ನಯಿಸಿದಳು.

ಚಂದ್ರಾಪೀಡ, ನಿಮ್ಮ ಇಚ್ಛೆಯೇ ನನ್ನ ಇಚ್ಛೆ— ಎನ್ನುತ್ತ ಮಹಾಶ್ವೇತೆಯನ್ನು ಹಿಂಬಾಲಿಸಿದ. ಇಬ್ಬರೂ ಹೇಮಕೂಟವನ್ನೇರಿ ಗಂಧರ್ವ ರಾಜನ ಕೋಟೆ ದಾಟ ಲೋಕೋತ್ತರವಾದ ಕನ್ಯಾಂತಃಪುರದ ವರೆಗೆ ಹೋದರು.

ಮಹಾಶ್ವೇತೆಯನ್ನು ಕಾಣುತ್ತಲೇ ಪ್ರತೀಹಾರಿ ಓಡುತ್ತ ಬಂದು ನಮಸ್ಕರಿಸಿದಳು; ಅವರನ್ನು ಕಾದಂಬರಿಯ ಕಡೆಗೆ ಕರೆದೊಯ್ದಳು.

ಚಂದ್ರಾಪೀಡ ಸುತ್ತಲೂ ನಿಬ್ಬೆರಗಾಗಿ ನೋಡಿದ. ಅದೊಂದು ಸ್ತ್ರೀಸೌಂದರ್ಯದ ಸಾಗರವೇ ಆಗಿತ್ತು. ದಾಸಿಯರ ಚೆಲುವಿಕೆ ಕೂಡ

ಅಸಾಮಾನ್ಯವಾಗಿತ್ತು. ಅವರ ನಡುವೆ, ಲೋಕೋತ್ತರ ಲಾವಣ್ಯದ ಕಾದಂಬರಿ ಚಂದ್ರಾಪೀಡನ ವಿಷಯವನ್ನೇ ಮತ್ತೆ ಮತ್ತೆ ಕೇಳುತ್ತ ಕುಳಿತಿದ್ದಳು. ಅಕಸ್ಮಾತ್ತಾಗಿ ಚಂದ್ರಾಪೀಡ ಕಾದಂಬರಿಯ ದೃಷ್ಟಿಗಳು ಕೂಡಿದುವು! ಇಬ್ಬರಿಗೂ ರೋಮಾಂಚನದ ಅನುಭವವಾಯಿತು.

ಅಷ್ಟರಲ್ಲಿ ಮಹಾಶ್ವೇತೆ– ಕಾದಂಬರೀ, ಭೂಲೋಕದ ಚಕ್ರವರ್ತಿ ತಾರಾಪೀಡನ ಏಕಮಾತ್ರ ಪುತ್ರನೇ ಈ ಚಂದ್ರಾಪೀಡ ಯುವರಾಜ. ದಿಗ್ವಿಜಯಕ್ಕಾಗಿ ಹೊರಟಾಗ ಅಕಸ್ಮಾತ್ ನನ್ನನ್ನು ಸಂಧಿಸಿದ. ಸರಳ ಸ್ವಭಾವದಿಂದ ನನ್ನ ಧರ್ಮ ಬಂಧುವಾಗಿದ್ದಾನೆ. ರೂಪ-ಯೌವನಗಳಿದ್ದರೂ ಅಹಂಕಾರಕ್ಕೆ ಆಸ್ಪದಕೊಟ್ಟಿಲ್ಲ. ಇಂತಹ ಸತ್ಪುರುಷನನ್ನು, ನನ್ನಂತೆಯೇ ನಿನ್ನ ಆಪ್ತನೆಂದು ತಿಳಿ. ಸಂಕೋಚವಿಲ್ಲದೆ ಮಾತನಾಡು– ಎಂದು ಹೇಳಿದಳು. ಕಾದಂಬರಿಯ ಪರಿಚಯವನ್ನಂತೂ ಮಹಾಶ್ವೇತೆ ಮೊದಲೇ ತಿಳಿಸಿದ್ದಳು ರಾಜಕುಮಾರನಿಗೆ.

ಚಂದ್ರಾಪೀಡ ಪದ್ಧತಿಯಂತೆ ವಿನಯದಿಂದ ತಲೆಬಾಗಿದ. ಕಾದಂಬರಿ ಮುಗುಳು ನಗುತ್ತ ಮುಂಡೆಯೂರಿ ನಮಸ್ಕರಿಸಿದಳು.

ಬಳಿಕ ಕಾದಂಬರಿ ಮಹಾಶ್ವೇತೆಯನ್ನು ತನ್ನ ಮಂಚದ ಮೇಲೆ ಕುಳ್ಳಿರಿಸಿಕೊಂಡಳು; ಚಂದ್ರಾಪೀಡನಿಗೆ ಮಣಿಪೀಠವನ್ನು ಹಾಕಿಸಿದಳು. ಬಳಿಕ ಕುಶಲ ಪ್ರಶ್ನೆಗಳು ನಡೆದುವು. ಕಾದಂಬರಿ ನಸು ನಾಚುತ್ತ ಓರೆಗಣ್ಣಿನಿಂದ ಚಂದ್ರಾಪೀಡನನ್ನು ನೋಡುತ್ತಲೇ ಇದ್ದಳು. ಉಪಹಾರ ಮುಗಿಯಿತು. ಮಹಾಶ್ವೇತೆಯ ಅಪ್ಪಣೆಯಂತೆ, ಕಾದಂಬರಿಯೇ ಯುವರಾಜನಿಗೆ ತಾಂಬೂಲ ಪಟ್ಟಿಯನ್ನು ಕೊಟ್ಟಳು. ಆ ಸುಖ ಸ್ಪರ್ಶದಿಂದ ಉಭಯತರಿಗೂ ರೋಮಾಂಚನವಾಗದೆ ಇರಲಿಲ್ಲ.

ಅಷ್ಟರಲ್ಲಿ ಕಾದಂಬರಿಯ ತಾಯ್ತಂದೆಗಳು ಮಹಾಶ್ವೇತೆಯನ್ನು ಕರೆಯಲು ಕಂಚುಕಿಯನ್ನು ಕಳಿಸಿದರು. ಕಾದಂಬರಿಯ ಪ್ರಾಸಾದದ ಹತ್ತಿರದ ಪ್ರಮದವನದ ಮಣಿಗೃಹದಲ್ಲಿ ಚಂದ್ರಾಪೀಡನ ವಸತಿಯು

ಏರ್ಪಾಟಾಯಿತು. ರಾಜಕುಮಾರ ತನ್ನ ಬೀಡಾರಕ್ಕೆ ತೆರಳಿದ. ಮಹಾಶ್ವೇತೆ ತಾಯ್ತಂದೆಗಳ ದರ್ಶನಕ್ಕೆ ನಡೆದಳು. ಕಾದಂಬರಿ ತನ್ನ ಪ್ರಾಸಾದ ಶಿಖರವನ್ನು ಏರಿದಳು.

—

## ೯. ಹೃದಯದ ಹೊಯ್ದಾಟ

ಕಾದಂಬರಿಯ ಹೃದಯದ ಹೊಯ್ದಾಟ ಕ್ಷಣಕ್ಷಣಕ್ಕೆ ಹೆಚ್ಚಹತ್ತಿತು. ಕಿಟಕಿಯ ಬಳಿ ನಿಂತು ಚಂದ್ರಾಪೀಡನ ಬೀಡಾರದ ಕಡೆಗೆ ನೋಡುವು ದೊಂದೇ ಆಕೆಯ ಕೆಲಸವಾಯಿತು.

ಅತ್ತ ಮಣಿಗೃಹದೊಳಗೆ ಚಂದ್ರಾಪೀಡನ ಅವಸ್ಥೆಯೂ ಹೀಗೆಯೇ ಆಗಿತ್ತು. ಕಾದಂಬರಿಯನ್ನು ಕಾಣುವ ನೆವದಿಂದ ಉಪವನದಲ್ಲಿ ಹೋಗಿ ಕುಳಿತ. ಕಾದಂಬರಿ ಅಂತಃಪುರದ ಕಿಟಕಿಯ ಬಳಿ ಬಂದಳು. ಇಬ್ಬರೂ ಕಟೆದ ಗೊಂಬೆಗಳಂತೆ ಒಬ್ಬರನ್ನೊಬ್ಬರು ನೋಡುತ್ತ ನಿಶ್ಚಲ ರಾಗಿ ನಿಂತುಬಿಟ್ಟಿದ್ದರು.

ಅಷ್ಟರಲ್ಲಿ, ಮಹಾಶ್ವೇತೆ ಬಂದ ಸುದ್ದಿ ಕಾದಂಬರಿಗೆ ತಿಳಿಯಿತು. ಬೆಚ್ಚಿಬಿದ್ದು ಕೆಳಗಿಳಿದು ಬಂದಳು. ಚಂದ್ರಾಪೀಡನೂ ಕ್ರೀಡಾಶೈಲ ದಿಂದ ಬೀಡಾರಕ್ಕೆ ಮರಳಿದ. ಬಳಿಕ ಸ್ನಾನ – ಸಂಧ್ಯಾದಿಗಳನ್ನು ಮುಗಿಸಿಕೊಂಡು, ಮರಕತ ಶಿಲಾತಲದ ಮೇಲೆ ಕುಳಿತ.

ಆಗ ಕಾದಂಬರಿಯ ಗೆಳತಿ ಮದಲೇಖೆ ಮತ್ತು ತರಲಿಕೆ ರಾಜ ವೈಭವದ ಉಡುಪು ಅಂಗರಾಗಗಳ ಕಾಣಿಕೆಗಳನ್ನು ಹೊನ್ನ ಹರಿವಾಣ ಗಳಲ್ಲಿ ಇಟ್ಟುಕೊಂಡು ಚಂದ್ರಾಪೀಡನ ಹತ್ತಿರಕ್ಕೆ ಬಂದರು. ಅವು ಗಳನ್ನು ಒಪ್ಪಿಸಿದ ಮೇಲೆ ಮದಲೇಖೆ— ರಾಜಪುತ್ರರೇ, ನಿಮ್ಮ ಸೌಂದರ್ಯ ಯಾರ ಮನಸ್ಸನ್ನೂ ಸೆಳೆಯಬಲ್ಲುದು. ನನ್ನ ಗೆಳತಿ ಕಾದಂಬರಿ ತನ್ನ ಆತ್ಮವನ್ನೇ ತಮಗೆ ಅರ್ಪಿಸಿದ್ದಾಳೆ. ಇದು ಸತ್ಪಾತ್ರ ದಾನ, ಎಂದು ತಿಳಿಯುತ್ತೇನೆ. ನಿಮ್ಮೊಡನೆ ಆಕೆ ಯಾವಜ್ಜೀವವೂ ಸುಖವಾಗಿರಬಲ್ಲಳು. ಅವಳು ತನ್ನ ನಿರ್ಮಲ ಪ್ರೇಮದ ಪ್ರತೀಕ

ವೆಂದು ಈ ಶೇಷ ಹಾರವನ್ನು ಮುಡಿಪು ಕಳಿಸಿದ್ದಾಳೆ, ದಯವಿಟ್ಟು ಸ್ವೀಕರಿಸಬೇಕು. ಇದು ದೇವ ಪರಂಪರೆಯಿಂದ ನಮ್ಮ ಗೆಳತಿಗೆ ದೊರೆತಿದೆ. ನಮ್ಮ ಒಡತಿಯ ಪ್ರೇಮವನ್ನು ಸ್ವೀಕರಿಸಿದುದರ ಕುರುಹಾಗಿ ತಾವು ಇದನ್ನು ಧರಿಸಬೇಕು. ಇದನ್ನು ತಿರಸ್ಕರಿಸಿದಿರಾದರೆ ನಮ್ಮ ಗೆಳತಿ ನಿಜಕ್ಕೂ ಪ್ರಾಣಗಳಿಗೆ ಎರವಾಗುತ್ತಾಳೆ. ಇದೇ ಅಂಜಿಕೆಯಿಂದಲೇ ಮಹಾಶ್ವೇತಾದೇವಿಯೂ ಈ ಕಾಣಿಕೆಯನ್ನು ಸ್ವೀಕರಿಸುವ ಕುರಿತು ನಿಮಗೆ ಬಲವಂತದ ಬಿನ್ನಹವನ್ನು ಕಳಿಸಿದ್ದಾರೆ— ಎಂದು ಮಧುರ ವಾಣಿಯಿಂದ ಕಾದಂಬರಿಯ ಮನದಿಂಗಿತವನ್ನು ತಿಳಿಸಿದಳು.

ಚಂದ್ರಾಪೀಡ ಅವಳ ವಾಕ್ಚಾತುರ್ಯವನ್ನು ಮೆಚ್ಚಿದ. ಕಾದಂಬರಿಯ ಸೌಖ್ಯ – ಸೌಂದರ್ಯಗಳಿಗೆ ಮೊದಲೇ ಮನಸೋತಿದ್ದ; ಈಗ ಮಾತಿನಿಂದಲೂ ಅವಳ ಮನೋದಯವನ್ನು ತಿಳಿದಂತೆ ಆಯಿತು. ಆ ಕೂಡಲೆ ಕಾಣಿಕೆಗಳನ್ನು ಸ್ವೀಕರಿಸಿದ; ಕೃತಜ್ಞತೆಗಳನ್ನು ಹೇಳಿ ಅವರನ್ನು ಬೀಳ್ಕೊಟ್ಟ.

ಚಂದ್ರೋದಯವಾಯಿತು. ಚಂದ್ರಾಪೀಡ ಕಾದಂಬರಿಯ ಬಗೆಗೆ ಏನೇನೋ ಧ್ಯಾನಿಸುತ್ತ ಕುಳಿತಿದ್ದ. ಅಷ್ಟರಲ್ಲಿ ಕೇಯೂರಕ ಬಂದ; ಕಾದಂಬರೀದೇವಿ ತಮ್ಮನ್ನು ಕಾಣಲು ಬರುತ್ತಿದ್ದಾಳೆ ಎಂದು ಹೇಳಿದ.

ಚಂದ್ರಾಪೀಡ ಚಟ್ಟನೆ ಎದ್ದು ಕುಳಿತ. ಕಾದಂಬರೀದೇವಿ ನೆಲಮುಟ್ಟಿ ನಮಸ್ಕರಿಸಿ ಸಮೀಪದಲ್ಲಿಯೇ ಮಣಿ ಕುಟ್ಟಿಮದ ಮೇಲೆ ಕುಳಿತಳು.

ತಾವಾಗಿ ಇಲ್ಲಿಗೆ ಆಗಮಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಿದಿರಿ— ಎಂದು ಚಂದ್ರಾಪೀಡ ಔಪಚಾರಿಕವಾಗಿ ಮಾತೆತ್ತಿದ. ಕಾದಂಬರಿಗೆ ಅಷ್ಟರಿಂದಲೇ ಸಂಕೋಚ ತೊಲಗಿತು. ಉಜ್ಜಯಿನೀ ರಾಜಧಾನಿ, ತಾರಾಪೀಡ ವಿಲಾಸವತಿ ರಾಜದಂಪತಿಗಳು, ಶುಕನಾಸ ಮಂತ್ರಿ ಮುಂತಾದವರ ಯೋಗಕ್ಷೇಮವನ್ನು ವಿಚಾರಿಸಿದಳು.

ಚಂದ್ರಾಪೀಡ ಅವಳ ಪ್ರಶ್ನೆಗೆ ಸಮರ್ಪಕ ಉತ್ತರಕೊಟ್ಟ. ಕಾದಂಬರೀದೇವಿ ಆತನ ಮಧುರ ರೂಪವನ್ನು ಹೃದಯದಲ್ಲಿ ಅಚ್ಚೊತ್ತಿಕೊಂಡಳು. ತುಸು ವೇಳೆ ಕಳೆದು ಅಲ್ಲಿಂದ ಪ್ರಾಸಾದಕ್ಕೆ

ಮರಳಿದಳು. ಚಂದ್ರಾಪೀಡನ ಮನಸ್ಸಿಗೂ ಎಷ್ಟೋ ತೃಪ್ತಿಯಾಗಿತ್ತು. ಅಂದಿನಿರುಳನ್ನು ಅವರಿಬ್ಬರೂ ಆನಂದದಲ್ಲಿಯೇ ಕಳೆದರು.

ಮರುದಿನ ಮುಂಜಾವದಲ್ಲಿ ಚಂದ್ರಾಪೀಡ ಪ್ರಾತರ್ವಿಧಿ–ವಿಧಾನಗಳನ್ನು ತೀರಿಸಿಕೊಂಡ. ಮಹಾಶ್ವೇತೆ ಕಾದಂಬರಿಯರ ದರ್ಶನವನ್ನು ಪಡೆದ; ಮರಳಿ ಉಜ್ಜಯಿನಿಗೆ ಹೋಗಬೇಕು, ಎಂಬ ಇಚ್ಛೆಯನ್ನು ಪ್ರಕಟಿಸಿದ. ಇಚ್ಛೆ ಇಲ್ಲದಿದ್ದರೂ ಕಾದಂಬರಿ ಒಪ್ಪಿಗೆ ಕೊಟ್ಟಳು; ಆತನಿಗೆ ಮಾರ್ಗದರ್ಶನ ಮಾಡಲು ಗಂಧರ್ವರನ್ನು ಕಳಿಸಿದಳು.

ಚಂದ್ರಾಪೀಡ ಮಹಾಶ್ವೇತೆಯ ಆಶ್ರಮಕ್ಕೆ ಬಂದ. ಅಷ್ಟರೊಳಗೆ ಆತನ ದಂಡು ಬಂದು ಸರೋವರದ ದಂಡೆಯ ಮೇಲೆ ಬೀಡು ಬಿಟ್ಟಿತ್ತು. ಯುವರಾಜ ಸೈನಿಕರ ಯೋಗಕ್ಷೇಮವನ್ನು ವಿಚಾರಿಸಿದ; ವೈಶಂಪಾಯನ ಪತ್ರಲೇಖೆಯರ ಇದಿರಿಗೆ ಕಾದಂಬರಿಯ ರೂಪ ಲಾವಣ್ಯಗಳನ್ನು ಅವಳ ಪರಿಜನರ ಸೌಜನ್ಯವನ್ನು ಬಗೆಬಗೆಯಿಂದ ಬಣ್ಣಿಸಿದ.

ಆ ಹೊತ್ತಿಗೆ ಕೇಯೂರಕ ಅಕಸ್ಮಾತ್ತಾಗಿ ಅಲ್ಲಿಗೆ ಬಂದ; ಚಂದ್ರಾಪೀಡನಿಗೆ ವಂದಿಸಿದ; ಮತ್ತು ಕಾದಂಬರೀದೇವಿ ಕಳಿಸಿದ ಸುಗಂಧ ದ್ರವ್ಯಗಳನ್ನು ಅರ್ಪಿಸುತ್ತ– ದೇವಾ, ತಾವು ಬಂದ ಮೇಲೆ ಗಂಧರ್ವ ನಗರ ಹಾಳು ಸುರಿಯುತ್ತಿದೆ. ಪರಿಜನರು ಸದಾ ನಿಮ್ಮ ಸದ್ಗುಣಗಳನ್ನೇ ನೆನೆಯುತ್ತಾರೆ. ಮಹಾಶ್ವೇತಾ– ಕಾದಂಬರೀದೇವಿಯರಂತೂ ಮತ್ತೊಮ್ಮೆ ತಮ್ಮನ್ನು ಕಾಣಲು ಆತುರರಾಗಿದ್ದಾರೆ. ಬೇಗನೆ ಅಲ್ಲಿಗೆ ಬರಬೇಕೆಂದು ಬಿನ್ನವಿಸಿದ್ದಾರೆ.... ಹಾಗೆಯೇ ದೇವಾ, ಈ ಶೇಷಹಾರವನ್ನು ಹಾಸಿಗೆಯ ಮೇಲೆ ಮರೆತೇ ಬಂದಿದ್ದಿರಿ. ಕೊಟ್ಟು ಕಳಿಸಿದ್ದಾರೆ.... ಎಂದು ಹಾರವನ್ನು ಆತನ ಕೈಯಲ್ಲಿಟ್ಟ.

ಕಾದಂಬರಿಯೇ ಕೈವಶವಾದಳೋ ಎನ್ನುವಷ್ಟು ಆನಂದವಾಯಿತು ಅರಸು ಮಗನಿಗೆ ಆ ಹಾರದಿಂದ. ಮಹಾಶ್ವೇತೆಯ ಆಮಂತ್ರಣ ಬಂದುದರಿಂದ ಅವನ ಮನಸ್ಸು ಮತ್ತೆ ಹೇಮಕೂಟಕ್ಕೆ ಹೋಗಲು ಹಂಬಲಿಸಹತ್ತಿತು. ಕೂಡಲೆ ರಾಜಕುಮಾರ ಸೈನಿಕ ಪರಿವಾರ

ವನ್ನು ಬೀಳ್ಕೊಂಡು, ಪತ್ರಲೇಖೆಯೊಡನೆ ಇಂದ್ರಾಯುಧವನ್ನು ಏರಿದ; ಮೆಲ್ಲ ಮೆಲ್ಲನೆ ಕೇಯೂರಕನ ಸಂಗಡ ಹೊರಟ. ದಾರಿಯುದ್ದಕ್ಕೂ ಅವನು ಕಾದಂಬರಿಯ ವೃತ್ತಾಂತವನ್ನೇ ಕೇಳುತ್ತಿದ್ದ ಕೇಯೂರಕ ನಿಂದ. ಕೇಯೂರಕ ಕಾದಂಬರಿಯ ವಿರಹವ್ಯಥೆಯನ್ನು ಬಲು ಸುಂದರವಾಗಿ ಬಣ್ಣಿಸುತ್ತಿದ್ದ.

ಕಾದಂಬರಿ ಕಾಮಜ್ವರದಿಂದ ಕಸವಿಸಿಪಡುತ್ತ ಹಿಮಗೃಹದಲ್ಲಿ ಮಲಗಿದ್ದಳು. ದಾಸಿಯರು ಬಗೆ ಬಗೆಯಿಂದ ಆಕೆಗೆ ಶಿತೋಪಚಾರ ಮಾಡುತ್ತಿದ್ದರು. ಸೇವಕರ ಬಳಿಪಿಡಿದು ಚಂದ್ರಾಪೀಡ ಅಲ್ಲಿಗೇ ಹೋದ. ಅಲ್ಲಿಯ ಶೀತಸಾಧನಗಳಿಂದ ಯುವರಾಜನಿಗೆ ನಡುಗು ಬಂದಿತು; ಆದರೆ ಕಾದಂಬರಿ ಉರಿ ಉರಿ ಎಂದು ಉರುಳಾಡುತ್ತಲೇ ಇದ್ದಳು.

ಚಂದ್ರಾಪೀಡನನ್ನು ಕಾಣುತ್ತಲೇ ಆಕೆ ತಟ್ಟನೆ ಎದ್ದು ಕುಳಿತಳು; ಆಸೆಗಣ್ಣುಗಳಿಂದ ಅವನ ಮೋರೆಯನ್ನು ಮಿಕಿ ಮಿಕಿ ನೋಡಿದಳು. ಚಂದ್ರಾಪೀಡ ಆಕೆಗೆ ಗೌರವದಿಂದ ವಂದಿಸಿ ಕುಳಿತ; ಮತ್ತು ಪತ್ರ ಲೇಖೆಯನ್ನು ಆಕೆಗೆ ಗುರುತು ಮಾಡಿಕೊಟ್ಟ. ಕಾದಂಬರಿ ಆಕೆಯನ್ನು ಆನಂದದಿಂದ ಅಪ್ಪಿಕೊಂಡು ಬಳಿಯಲ್ಲಿಯೇ ಕುಳ್ಳಿರಿಸಿಕೊಂಡಳು.

ಬಳಿಕ ಯುವರಾಜ ಕಾದಂಬರಿಯನ್ನು ಕುರಿತು— ದೇವೀ ಬಹಳ ಸೊರಗಿದ್ದೀರಿ. ಹೀಗಾಗಲು ಕಾರಣವೇನು?— ಎಂದು ಕೇಳಿದ.

ಕಾದಂಬರಿ ನಾಚಿಕೆಯಿಂದ ಮಾತನಾಡಲಿಲ್ಲ. ಮದಲೇಖೆಯೇ ಉತ್ತರಿಸಿದಳು— ರಾಜಕುಮಾರರೇ, ನಮ್ಮ ಗೆಳತಿಯ ಸಂತಾಪಕ್ಕೆ ಬಾಯಿ ಇಲ್ಲ. ನೀವೇ ತಿಳಿದುಕೊಂಡು ಈಕೆಯನ್ನು ಕಾಪಾಡ ಬೇಕು.

ಈ ಸೂಚ್ಯವಾದ ಮಾತಿನಿಂದ ಚಂದ್ರಾಪೀಡ ಒಳಗೊಳಗೇ ಆನಂದ ಪಟ್ಟ. ಕಾದಂಬರಿಯ ಇಚ್ಛೆಯಂತೆ ಪತ್ರಲೇಖೆಯನ್ನು ಅವಳ ಹತ್ತಿ ರವೇ ಬಿಟ್ಟ; ತಾನು ಪುನಃ ಸೈನ್ಯದ ಕಡೆಗೆ ಸಾಗಿದ.

ಅಷ್ಟರಲ್ಲಿ ತಾರಾಪೀಡ ದೊರೆಯಿಂದ ಮಗನಿಗೆ ಅವಸರದ ಕರೆ

ಬಂದಿತ್ತು. ಆತನಿಗೂ ತಾಯ್ತಂದೆಗಳನ್ನು ನೋಡದೆ ಬಹುಕಾಲ ವಾಗಿತ್ತು. ಅವಸರದಿಂದ ಇಂದ್ರಾಯುಧವನ್ನು ಏರಿದ. ಮೇಘ ನಾದ ದಳಪತಿಗೆ,– ಹೇಮಕೂಟದಿಂದ ಪತ್ರಲೇಖೆ ಬರುತ್ತಾಳೆ. ಅವ ಳನ್ನು ನೀನು ಕರೆತರಬೇಕು— ಎಂದು ಅಪ್ಪಣೆ ಮಾಡಿದ. ವೈಶಂಪಾ ಯನನಿಗೆ, ಸೈನ್ಯವನ್ನು ವ್ಯವಸ್ಥೆಯಿಂದ ಸಾಗಿಸಿಕೊಂಡು ಬರಬೇಕು, ಎಂದು ವಿನಂತಿಸಿದ. ಬಳಿಕ ವೇಗದಿಂದ ಕುದುರೆಯನ್ನು ಓಡಿಸುತ್ತ ಉಜ್ಜಯಿನಿಗೆ ಹೊರಟ.

—

## ೧೦. ಗಿಳಿಯಾಗಿ ಹುಟ್ಟು!

ಚಂದ್ರಾಪೀಡನನ್ನು ಕಂಡ ಕೂಡಲೆ ತಾರಾಪೀಡನ ಎದೆಗಡಲು ಉಕ್ಕೇರಿತು. ಮಗನನ್ನು ಅಪ್ಪಿಕೊಂಡು ಆನಂದಾಶ್ರುಗಳಿಂದ ಅಭಿ ಷೇಕ ಮಾಡಿಬಿಟ್ಟ. ಬಳಿಕ ಯುವರಾಜ ಮಾಂಡಲಿಕರ ಅಭಿವಂದನೆ ಗಳನ್ನು ಸ್ವೀಕರಿಸುತ್ತ ಮಾತೃದರ್ಶನಕ್ಕೆ ಹೋದ. ತಾಯಿ ಅತ್ಯಾ ನಂದದಿಂದ ಶುಭಾಶೀರ್ವಾದ ಮಾಡಿದಳು. ಆಮೇಲೆ ಶುಕನಾಸ ಮಂತ್ರಿಗಳನ್ನು ಕಂಡು ಅಭಿವಂದಿಸಿದ. ಮನೋರಮಾ ತಾಯಿಗೆ ವಂದಿಸಿ, ಆಕೆಗೆ ವೈಶಂಪಾಯನನ ಕ್ಷೇಮವಾರ್ತೆಯನ್ನು ತಿಳಿಸಿ ಆರ ಮನೆಗೆ ಆಗಮಿಸಿದ. ಆಮೇಲೆ ಸ್ನಾನ ಅರ್ಚನೆ ಭೋಜನಗಳನ್ನು ಮುಗಿಸಿ ತನ್ನ ಕುಮಾರ ಭವನದಲ್ಲಿ ವಿಶ್ರಾಂತಿಯನ್ನು ಪಡೆದ.

ಎಲ್ಲಿದ್ದರೂ ಚಂದ್ರಾಪೀಡನಿಗೆ ಕಾದಂಬರಿಯ ಚಿಂತೆಯೇ ಚಿಂತೆ. ಪತ್ರಲೇಖೆ ಬರುವ ಹಾದಿಯನ್ನೇ ಕಾಯುತ್ತಿದ್ದ. ಅದೊಂದು ದಿನ ಮೇಘನಾದ ಪತ್ರಲೇಖೆಯನ್ನು ಕರೆತಂದ.

ಚಂದ್ರಾಪೀಡ ಪತ್ರಲೇಖೆಯನ್ನು ಮಲ್ಲಿಗೆಯ ಲತಾಮಂಟಪಕ್ಕೆ ಕರೆದೊಯ್ದು; ಕಾದಂಬರಿಯ ವೃತ್ತಾಂತವನ್ನು ಕೇಳಿದ. ಆಕೆ— ಒಡೆಯಾ, ಕಾದಂಬರಿಯ ವೃತ್ತಾಂತವನ್ನು ಯಾವುದೆಂದು ಹೇಳಲಿ? ಆಕೆಗೆ ಎತ್ತ ನೋಡಿದತ್ತ ನೀವೇ ಕಾಣುತ್ತೀರಿ. ಕನಸಿನಲ್ಲಿ ಕೂಡ

ನಿಮ್ಮನ್ನೇ ನೋಡುತ್ತಾಳೆ. ನೀವು ಆ ದಿನ ಹಿಮಗೃಹದಲ್ಲಿ ಅವಳನ್ನು ಬಿಟ್ಟು ಬಂದ ಮೇಲೆ, ಅವಳ ತಾಪ ಇಮ್ಮಡಿಸಿ ಹೋಯಿತು. ನೀವು ಬೇಗನೆ ಅವಳನ್ನು ಕಾಣದಿದ್ದರೆ ಪ್ರಾಣತ್ಯಾಗಕ್ಕೂ ಸಿದ್ಧಳಾಗುವಂತೆ ತೋರಿತು. ಆಗ ನಾನು, ಯುವರಾಜರನ್ನು ನಿಮ್ಮ ಕಡೆಗೆ ನಾನೇ ಕರೆದುಕೊಂಡು ಬರುತ್ತೇನೆ, ಎಂದು ಮಾತು ಕೊಟ್ಟೆ. ಆ ಮೇಲೆ ತುಸು ಶಾಂತಳಾಗಿದ್ದಾಳೆ. ನೀವು ಬೇಗನೆ ಅಲ್ಲಿಗೆ ಹೋಗಲೇಬೇಕು— ಎಂದು ಬಿನ್ನಯಿಸಿದಳು.

ಚಂದ್ರಾಪೀಡನಿಗೆ ದಿನಗಳು ಯುಗಗಳಂತೆ ಉರುಳತೊಡಗಿದುವು. ಮುಂದೊಂದು ದಿನ ಕೇಯೂರಕ ಹೇಮಕೂಟದಿಂದ ಬಂದ; ಕಾದಂಬರಿ ತೀರಾ ಸೊರಗಿ ಹೋಗಿದ್ದಾಳೆ. ಅವಳ ತಾಪವನ್ನು ನೋಡಲಾರದೆ, ತಮ್ಮನ್ನು ಕರೆಯಲು ನಾನಾಗಿಯೇ ಬಂದಿರುವೆ. ತಾವು ತಡಮಾಡದೆ ಅಲ್ಲಿಗೆ ಬರಬೇಕು; ಕಾದಂಬರೀದೇವಿಯ ವಿರಹತಾಪವನ್ನು ಕಡಮೆ ಮಾಡಬೇಕು— ಎಂದು ಕೈಮುಗಿದು ಕೇಳಿಕೊಂಡ.

ಕಾದಂಬರೀ ದರ್ಶನಕ್ಕಾಗಿ ಚಂದ್ರಾಪೀಡನ ಮನಸ್ಸು ಲವಲವಿಸತೊಡಗಿತು. ಆದರೆ ತಂದೆಯ ಅಪ್ಪಣೆಯಿಲ್ಲದೆ ಹೇಗೆ ಹೋಗುವುದು ? ಕಾರಣವಿಲ್ಲದೆ ಅಪ್ಪಣೆ ಪಡೆಯುವುದಾದರೂ ಹೇಗೆ ? ವೈಶಂಪಾಯನನಾದರೂ ಏಕೆ ಬರಲಿಲ್ಲ ? ........ಹೀಗೆಯೇ ಚಿಂತಿಸುತ್ತಿದ್ದ. ಅಷ್ಟರಲ್ಲಿ ದಿಗ್ವಿಜಯಕ್ಕೆ ಹೋದ ಸೈನ್ಯ ಮರಳಿ ಬಂದ ಸುದ್ದಿ ತಿಳಿಯಿತು.

ಚಂದ್ರಾಪೀಡನಿಗೆ ಈಗ ಅನುಕೂಲವಾಯಿತು. ತಾನು ಬೇಗನೆ ಬರುವುದಾಗಿ ಹೇಳಿ, ಕೇಯೂರಕನ ಸಂಗಡ ಪತ್ರಲೇಖೆಯನ್ನು ಮುಂಗಡವಾಗಿ ಕಳಿಸಿದ; ತಾನು ವೈಶಂಪಾಯನನ ಕ್ಷೇಮವನ್ನು ಕೇಳಲು **ದಶಪುರ**ದಲ್ಲಿಯ ಸೈನಿಕ ವಸತಿಗೆ ಬಂದ.

ದಂಡನಾಯಕರೆಲ್ಲ ದುಮ್ಮಾನದಿಂದ ಕುಳಿತಿದ್ದರು. ವೈಶಂಪಾಯನನ ಸುಳಿವೇ ಇಲ್ಲ. ವೈಶಂಪಾಯನ ಎಲ್ಲಿದ್ದಾನೆ ? ಎಂದು ದಂಡನಾಯಕನನ್ನು ಕೇಳಿದ.

ದಂಡನಾಯಕ ಕೈಮುಗಿದು ವಿಜ್ಞಾಪಿಸಿದ— ಪ್ರಭುವೇ, ಸರೋವರದ ದಂಡೆಯ ಮೇಲೆ ಏನನ್ನು ನೋಡಿದನೋ ! ಭ್ರಾಂತನಂತೆ ಅತ್ತ ಹೊರಟೇ ಹೋದ. ಎತ್ತ ಹೋದನೋ ತಿಳಿಯಲಿಲ್ಲ. ಮಾತ್ರ ಜೀವದಿಂದ ಇದ್ದಾನೆ.

ಈ ಸುದ್ದಿ ರಾಜನಿಗೂ ಮಂತ್ರಿಗೂ ಮೊದಲೇ ತಿಳಿದಿತ್ತು. ಮುಂದೇನು ಮಾಡಬೇಕೆಂಬ ವಿಚಾರದಲ್ಲಿ ಇದ್ದರು. ಚಂದ್ರಾಪೀಡ ಅವರ ಅಪ್ಪಣೆ ಪಡೆದು ಗೆಳೆಯನನ್ನು ಹುಡುಕಲು ಅಚ್ಛೋದ ಸರೋವರಕ್ಕೆ ಹೊರಟ. ಎಲ್ಲಿ ನೋಡಿದರೂ ವೈಶಂಪಾಯನ ಸಿಕ್ಕಲಿಲ್ಲ. ಮಹಾಶ್ವೇತೆಯ ಆಶ್ರಮಕ್ಕೆ ಹೋಗಿರಬಹುದೇ— ಎಂದು ಅಲ್ಲಿಗೆ ಹೋದ.

ಮಹಾಶ್ವೇತೆ ದೀನಳಾಗಿ ಕಂಬನಿಗರೆಯುತ್ತ ಕುಳಿತಿದ್ದಳು; ತರಲಿಕೆ ಆಕೆಯನ್ನು ಸಮಾಧಾನಪಡಿಸುತ್ತಿದ್ದಳು. ಮಹಾಶ್ವೇತೆ ಚಂದ್ರಾಪೀಡನನ್ನು ಕಣ್ಣೆತ್ತಿ ಕೂಡ ನೋಡಲಿಲ್ಲ. ಯಾವ ಅನಿಷ್ಟ ಒದಗಿದೆಯೋ— ಎಂದು ಅವನ ಮನಸ್ಸು ಅಳುಕಿತು. ದೇವೀ, ಈ ದುಃಖಕ್ಕೆ ಕಾರಣವೇನು ? ಎಂದು ವಿನಯದಿಂದ ಕೇಳಿದ.

"ರಾಜಕುಮಾರಾ, ಏನು ಹೇಳಲಿ? ಹೇಮಕೂಟದಿಂದ ತಿರುಗಿ ಬಂದ ಮೇಲೆ ಪುನಃ ತಪಸ್ಸಿಗೆ ತೊಡಗಿದೆ. ಒಂದು ದಿನ ನಿನ್ನ ಹರಯದ ತರುಣ ಇಲ್ಲಿಗೆ ಬಂದ; ಸುಂದರೀ ನಿನ್ನನ್ನು ಮೋಹಿಸಿರುವೆ.... ಮುಂತಾಗಿ ಅವಿನಯದಿಂದ ಮಾತಾಡಿದ; ಮುಂದುವರಿದು ನನ್ನ ಕೈಹಿಡಿದ. ನಾನು ಸಿಟ್ಟಾಗಿ, ಈಗಿಂದೀಗಲೇ ಸುಟ್ಟು ಹೋಗು, ಎಂದು ಶಾಪಕೊಟ್ಟೆ. ಆಗ ಅವನಿಗೆ ಪಶ್ಚಾತ್ತಾಪವಾಗಿ ಬಹಳ ಹೇಳಿಕೊಂಡ. **'ಗಿಳಿ' ಯಾಗಿ ಹುಟ್ಟು** ಎಂದು ಶಾಪನೀಡಿದೆ. ಆ ಕೂಡಲೆ ಅವನು ಸುಟ್ಟು ಭಸ್ಮವಾಗಿ ಬಿದ್ದ. ಅವನು ನಿನ್ನ ಗೆಳೆಯ ವೈಶಂಪಾಯನ ಎಂಬುದು ಆ ಮೇಲೆ ತಿಳಿಯಿತು........

ಮಹಾಶ್ವೇತೆಯ ಮಾತು ನಡೆದಿತ್ತು. "ದೇವೀ, ಘಾತವಾಯಿತು. ಈ ಜನ್ಮದಲ್ಲಿ ಕಾದಂಬರೀದೇವಿಯ ಸಮಾಗಮವಾಗಲಾರದು. ಹಾ!

ಮಿತ್ರಾ ವೈಶಂಪಾಯನಾಽಽ!" ಎನ್ನುತ್ತ ನೆಲಕ್ಕೆ ಒರಗಿಬಿಟ್ಟ. ಆ ಕೂಡಲೆ ಅವನ ಪ್ರಾಣಪಕ್ಷಿ ಹಾರಿ ಹೋಯಿತು.

ತರಲಿಕೆ ಹೌಹಾರಿ ಚಂದ್ರಾಪೀಡನನ್ನು ಹಿಡಿದಳು. ಮಹಾಶ್ವೇತೆಯಂತೂ ಹೌಹಾರಿ ಕಟೆದ ಕಲ್ಲಿನಂತೆ ಕುಳಿತಳು !....

—

## ೧೧. ಚಂದ್ರನೇ ಚಂದ್ರಾಪೀಡ

ಅತ್ತ ಪತ್ರಲೇಖೆ ಕಾದಂಬರಿಯನ್ನು ಕಂಡಳು. ಚಂದ್ರಾಪೀಡ ಯುವರಾಜರು ಬೇಗನೆ ಬರುತ್ತಾರೆ— ಎಂದು ತಿಳಿಸಿದಳು. ಕಾದಂಬರಿಗೆ ಒಂದು ಕ್ಷಣವೂ ಒಂದು ಯುಗವಾಗಿತ್ತು. ಆತನು ಮಹಾಶ್ವೇತೆಯಲ್ಲಿಗೆ ಬಂದಿರಬಹುದು, ಎಂದು ಪತ್ರಲೇಖೆಯೊಡನೆ ಅಲ್ಲಿಗೇ ಹೊರಟಳು. ಚಂದ್ರಾಪೀಡನನ್ನು ಕಂಡ ಮೇಲೆ ತಾನು ಹೇಗೆ ಹೇಗೆ ಮಾತಾಡತಕ್ಕದ್ದು, ಎಂಬುದನ್ನು ದಾರಿಯಲ್ಲಿಯೇ ಎಣಿಕೆ ಹಾಕುತ್ತಿದ್ದಳು. ಆದರೆ ಅಲ್ಲೇನು ನಡೆದಿತ್ತು ?.... ?

ಹಾ ನಾಥಾಽಽ! ಎಂದು ಕಾದಂಬರಿ ಚಂದ್ರಾಪೀಡನ ಶವದ ಮೇಲೆ ಬಿದ್ದು ಮೂರ್ಛೆ ಹೋದಳು. ಪತ್ರಲೇಖೆಯೂ ಮೈಮರೆತು ಬಿದ್ದಳು. ಎಚ್ಚತ್ತಮೇಲೆ ಮದಲೇಖೆ ಗೆಳತೀ ಕಾದಂಬರೀ, ಧೈರ್ಯ ತಾಳು. ದುಃಖಾವೇಗದಿಂದ ಎದೆ ಸೀಳಿ ಹೋದೀತು. ಇದರಿಂದ ನಿನ್ನ ತಾಯ್ತಂದೆಗಳಿಗೆ ಆಗುವ ದುಃಖವನ್ನು ಕಲ್ಪಿಸು.

"ಹುಚ್ಚೀ, ಸತ್ತ ಪ್ರಿಯತಮನನ್ನು ನೋಡುವಾಗ ಒಡೆಯಲಾರದ ಹೃದಯ ಮತ್ತೆ ಸೀಳಿ ಹೋದೀತೇ? ಮದಲೇಖಾ, ಇನ್ನು ನನ್ನ ದಾಸ ದಾಸಿಯರು ಅಂತಃಪುರದ ಪಶು ಪಕ್ಷಿಗಳನ್ನು ನೀನೇ ನೋಡಿಕೊಳ್ಳಬೇಕು. ನಾನಿನ್ನು ಪ್ರಿಯನೊಡನೆ ಅಗ್ನಿ ಪ್ರವೇಶ ಮಾಡುವೆ. ಪ್ರಿಯ ಗೆಳತಿ ಮಹಾಶ್ವೇತೇ, ನೀನೂ ನನ್ನಂತೆಯೇ ಪ್ರಿಯ ವಿಯೋಗದಿಂದ ದುಃಖಿತಳಾಗಿರುವಿ. ಆದರೆ, ಪ್ರಿಯನ ಪುನಃ ಸಮಾಗಮಕ್ಕೆ ದಿವ್ಯ ಪುರುಷನ ವಾಣಿ ನಿನಗೆ ಆಧಾರವಾಗಿದೆ. ನನಗೆ ಯಾವ

ಆಸೆಯೂ ಇಲ್ಲ. ಅಗ್ನಿಯನ್ನು ಆಶ್ರಯಿಸಿ ಮನೋಹರನ ಮಾರ್ಗ ವನ್ನು ಹಿಡಿಯುವುದೊಂದೇ ಉಪಾಯ ಉಳಿದಿದೆ" ಎನ್ನುತ್ತ, ಚಂದ್ರಾಪೀಡನ ಚರಣಗಳಿಗೆ ನಮಸ್ಕರಿಸಿದಳು; ಆತನ ತಲೆಯನ್ನು ತೊಡೆಯ ಮೇಲೆ ತೆಗೆದುಕೊಂಡಳು.

ಆ ಕೂಡಲೆ ಚಂದ್ರಾಪೀಡನ ಮೋರೆಯಲ್ಲಿ ಚಂದ್ರಮನ ಕಾಂತಿ ಹೊರಟಿತು. ಮತ್ತು ಆಕಾಶವಾಣಿಯೊಂದು ಕೇಳಿತು— ಮಹಾ ಶ್ವೇತೇ, ನಿನಗೆ ಅಭಯಕೊಟ್ಟವನು ನಾನೇ. ನಿನ್ನ ಪ್ರಿಯಕರನ ಶರೀರ ನನ್ನಲ್ಲಿ ಸುಕ್ಷೇಮವಾಗಿದೆ. ಶಾಪ ಮುಗಿಯುತ್ತಲೇ ನಿನ್ನ ಬಳಿಗೆ ಬರುತ್ತಾನೆ. ಚಂದ್ರಾಪೀಡನ ದೇಹವೆಂದರೆ ನನ್ನ ದೇಹವೇ. ಕಾದಂಬರಿಯ ಕರಸ್ಪರ್ಶದಿಂದ ಈತನಿಗೆ ಪುನಃ ಪ್ರಾಣ ಬರುತ್ತಿದೆ. ಅಲ್ಲಿಯ ವರೆಗೆ ಈ ದೇಹವನ್ನು ಹೀಗೆಯೇ ಹಿಡಿದು ಕುಳಿತಿರಲಿ. ಶಾಪದ ಸಮಯ ಮುಗಿಯುತ್ತ ಬಂದಿದೆ. ಮೃತದೇಹಕ್ಕೆ ಯಾವ ಅಪಾಯವನ್ನು ಮಾಡಕೂಡದು.

ಚಂದ್ರಾಪೀಡನ ಮರಣದಿಂದ ಪತ್ರಲೇಖೆಗೆ ಜೀವವೇ ಬೇಡ ವಾಯಿತು. ಆಕೆ ಇಂದ್ರಾಯುಧವನ್ನು ಏರಿಕೊಂಡು ಹೋಗಿ ಸರೋ ವರದಲ್ಲಿ ಧುಮ್ಮಿಕ್ಕಿಬಿಟ್ಟಳು. ಇಬ್ಬರೂ ಮುಳುಗಿದರು. ತುಸು ಹೊತ್ತಿನಲ್ಲಿ ಇಂದ್ರಾಯುಧದ ಬದಲು ಕಪಿಂಜಲ ಮುನಿ ಎದ್ದು ಬಂದ; ಮಹಾಶ್ವೇತೆಯನ್ನು ಕಂಡ. ಆ ಸಾಧ್ವಿ ಆತನನ್ನು ಭಕ್ತಿಯಿಂದವಂದಿಸಿ, ದೇವಲೋಕದಲ್ಲಿ ಪುಂಡರೀಕನ ಸಮಾಚಾರವನ್ನು ಕೇಳಿದಳು.

ಕಪಿಂಜಲ ಮುನಿ— ತಾಯಿ, ಪುಂಡರೀಕನ ದೇಹವನ್ನು ಒಯ್ದವನು ಸಾಕ್ಷಾತ್ ಚಂದ್ರಮ. ಅವನು ತನ್ನ ದಿವ್ಯಾಸನದಲ್ಲಿ ಆತನನ್ನು ಮಲಗಿಸಿದ್ದಾನೆ. ಪುಂಡರೀಕ ಕಾಮಜ್ವರದಿಂದ ಬಳಲುತ್ತಿ ದ್ದಾಗ ಚಂದ್ರ ಹುಟ್ಟಿದ್ದ. ಅದರಿಂದ ಮತ್ತಿಷ್ಟು ಬಳಲಿಕೆ ಬಲವಾ ಗಲು— ಚಂದ್ರಾ, ನೀನು ಜನ್ಮ ಜನ್ಮಾಂತರಗಳಲ್ಲಿ ಮನುಷ್ಯನಾಗಿ ಹುಟ್ಟು— ಎಂದು ಶಾಪಕೊಟ್ಟನಂತೆ. ಆಗ ಚಂದ್ರಮ— ನಾನು ಚಂದ್ರಾಪೀಡನಾಗಿ ಹುಟ್ಟುತ್ತೇನೆ; ಆಗ ನೀನು ವೈಶಂಪಾಯನನಾಗಿ

ನನ್ನ ಮಂತ್ರಿಯಾಗು. ಪುನಃ ನಿನ್ನ ಸೊಕ್ಕಿನಿಂದ ಗಿಳಿಯಾಗಿ ಹುಟ್ಟುವಿ. ಆ ಸಮಯದಲ್ಲಿ ನಾನು ಶೂದ್ರಕ ರಾಜನಾಗಿ ಜನ್ಮ ತಾಳುತ್ತೇನೆ. ಆಮೇಲೆ ಚಾಂಡಾಲ ಕನ್ನಿಕೆ ಗಿಳಿಯಾದ ನಿನ್ನನ್ನು ನನ್ನ ಬಳಿಯಲ್ಲಿ ತರುತ್ತಾಳೆ. ಹೀಗೆ ಅವರಿಬ್ಬರಲ್ಲಿ ಶಾಪ ಪ್ರತಿಶಾಪ ಗಳು ನಡೆದಿವೆ. ಈ ಘಟನೆಗಳೆಲ್ಲ ಆ ಶಾಪಗಳ ಫಲಗಳು. ಪುಂಡರೀಕನ ತಂದೆ ಶ್ವೇತಕೇತು ಮುನಿಯೂ ಚಂದ್ರಾಪೀಡನ ತಂದೆ ತಾರಾಪೀಡನೂ ಮಕ್ಕಳ ಸಲುವಾಗಿ ಪರಮೇಶ್ವರನನ್ನು ಆರಾಧಿಸ ಬೇಕು. ಪರಿಣಾಮವಾಗಿ, ಪುಂಡರೀಕ ಚಂದ್ರಾಪೀಡರು ಸಜೀವವಾಗು ತ್ತಾರೆ. ಈ ವಿಷಯವನ್ನು ಆ ತಾಯ್ತಂದೆಗಳಿಗೆ ತಿಳಿಸಲು ನಾನು ಅವ ಸರದಿಂದ ಹೊರಟಿದ್ದೆ. ದಾರಿಯಲ್ಲಿ ಒಬ್ಬ ಮುನಿಯನ್ನು ತುಳಿದೆ. ಕೂಡಲೆ ಅವನು, ನೀನು ಕುದುರೆಯಾಗು, ಎಂದು ನನಗೆ ಶಾಪ ಕೊಟ್ಟ. ನನಗೆ ಇಂದ್ರಾಯುಧನ ಜನ್ಮ ಬಂದಿತು. ಈಗ ನನಗೆ ಪುನರ್ಜನ್ಮವಾಗಿ ಮೊದಲಿನ ದೇಹ ಬಂದಿತು. ಮಿತ್ರರ ಶಾಪದ ಕೊನೆಗಾಲ ಸಮೀಪಿಸಿದೆ. ಬೇಗನೆ ಶ್ವೇತಕೇತು ಮುನಿಯ ಹತ್ತಿರ ಹೋಗಬೇಕು— ಎಂದು ಕಪಿಂಜಲ ಹೊರಟು ಬಿಟ್ಟ.

ಪತ್ರಲೇಖೆ ಏನಾದಳೋ ಅವನಿಗೆ ತಿಳಿದಿರಲಿಲ್ಲ.

ಕಾದಂಬರಿಯ ಕೈಯಲ್ಲಿದ್ದ ಚಂದ್ರಾಪೀಡನ ದೇಹ ದಿನದಿನಕ್ಕೆ ಕಳೆಯೇರುತ್ತಿತ್ತು. ಚಂದ್ರಾಪೀಡನ ಪರಿವಾರದವರೂ ತಾಯ್ತಂದೆ ಗಳೂ ಅಲ್ಲಿಗೆ ಬಂದರು; ಮಗನ ಕಾಂತಿ ಪೂರ್ಣವಾದ ಶವವನ್ನು ನೋಡಿದರು; ಕಪಿಂಜಲನ ಹೇಳಿಕೆಯಂತೆ ಚಂದ್ರಾಪೀಡನ ಪುನರ್ಜನ್ಮ ವಾಗುವುದೆಂದು ನಂಬಿದರು; ಕಾದಂಬರಿಗೆ ಧೈರ್ಯ ಹೇಳಿ ತಾರಾಪೀಡ ದಂಪತಿಗಳು ತಪಶ್ಚರ್ಯಕ್ಕೆ ಹೊರಟರು.

ಜಾಬಾಲಿ ಋಷಿ ಕೊನೆಗೆ, ಮಹಾಶ್ವೇತೆ ಕಾದಂಬರಿಯರು ತಮ್ಮ ಪ್ರಿಯರ ಪ್ರಾಪ್ತಿಯ ಸಲುವಾಗಿ ಇಂದಿಗೂ ತಮ್ಮ ನಿಯಮಗಳನ್ನು ನಡೆಸಿದ್ದಾರೆ. ವೈಶಂಪಾಯನನ ಶಾಪದ ಜನ್ಮವೇ ಈ ಗಿಳಿ— ಎಂದು ಕತೆಯನ್ನು ಮುಗಿಸಿದರು.

ಶೂದ್ರಕ ದೊರೆಯೇ, ಆ ಕತೆಯನ್ನು ಕೇಳುತ್ತಿದ್ದಾಗ ನನಗೆ ನನ್ನ ಎರಡೂ ಜನ್ಮಗಳ ನೆನಪಾಯಿತು. ಕೂಡಲೆ ಮಹಾಶ್ವೇತೆಯ ಕಡೆಗೆ ಹಾರಿ ಹೋಗ ಬೇಕೆನುವ ಚಪಲತೆಯನ್ನು ತೋರಿಸಿದೆ. ಪಕ್ಕ ಬಲಿಯಲಿ;ಹಾರಿಹೋಗುವಿಯೆಂತೆ,ಎಂದು ಋಷಿಗಳು ಸಿಟ್ಟು ಮಾಡಿದರು.

ಅಷ್ಟರಲ್ಲಿ ಕಪಿಂಜಲ ನನ್ನನ್ನು ಹುಡುಕುತ್ತ ಬಂದ. ನನಗೆ ನಾಚಿಕೆಯಾಗಿ ಕಣ್ಣೀರು ಸುರಿಸಿದೆ. ಆತನು ಶಾಪವೃತ್ತಾಂತವೆಲ್ಲವನ್ನು ತಿಳಿಸಿ ಸಮಾಧಾನ ಮಾಡಿದ. ಮಗನ ಬಿಡುಗಡೆಯ ಸಲುವಾಗಿ ತಪಸ್ಸು ಮಾಡಬೇಕೆಂದು ನನ್ನ ತಂದೆಗೆ ಹೇಳಲು ಹೊರಟು ಹೋದ.

ಕೆಲವು ದಿನ ಕಳೆದುವು. ಪಕ್ಕ ಬಲಿತುವು. ಮುನಿಗಳಿಗೆ ಹೇಳದೆ ಕೇಳದೆ ಆಕಾಶಕ್ಕೆ ಹಾರಿದೆ; ಶಕ್ತಿ ಸಾಲದೆ ಒಂದು ಗಿಡದ ಕೆಳಗೆ ಬಿದ್ದೆ. ಬೇಡನೊಬ್ಬ ಬಲೆಹಾಕಿ ನನ್ನನ್ನು ಹಿಡಿದ. ಆಗ ನಾನು ದೈನ್ಯದಿಂದ– ಪುಣ್ಯಾತ್ಮಾ, ನಾನೊಬ್ಬ ಮುನಿಕುಮಾರ. ಶಾಪದಿಂದ ಹೀಗಾಗಿದ್ದೇನೆ. ನನ್ನನ್ನು ಬಿಡು– ಎಂದು ಬೇಡಿಕೊಂಡೆ.

ಅವನಿಗೆ ನನ್ನ ಮಾತುಕೇಳಿ ಮತ್ತಿಷ್ಟು ಆನಂದವಾಯಿತು. ಅವರ ಒಡೆಯನ ಮಗಳಿಗೆ ಯಾರೋ ಹೇಳಿದ್ದರಂತೆ– ಜಾಬಾಲಿ ಋಷಿಗಳ ಆಶ್ರಮದಲ್ಲಿ ವೇದಶಾಸ್ತ್ರಗಳನ್ನು ಬಲ್ಲ ಗಿಳಿ ಇದೆ, ಎಂದು. ಅದನ್ನು ತಂದು ಕೊಡುವವರಿಗೆ ಸಾವಿರ ಹೊನ್ನು ಕೊಡುವುದಾಗಿ ಸಾರಿದ್ದಳೆಂತೆ. ನಾನು ಕೈಗೆ ಸಿಕ್ಕುದರಿಂದ ತಾನಾಗಿಯೇ ಅವನ ಭಾಗ್ಯ ತೆರೆದಂತಾಯಿತು. ಎಂದಮೇಲೆ ನನ್ನನ್ನು ಬಿಟ್ಟಾನೇ ? ತಡವಿಲ್ಲದೆ ಹೋಗಿ ಆ ಚಾಂಡಾಲಕನ್ಯೆಯ ಕೈಯಲ್ಲಿ ನನ್ನನ್ನು ಕೊಟ್ಟ.

ಪ್ರಭುವೇ, ಚಾಂಡಾಲ ಕನ್ಯೆ ಬೇರೆ ಯಾರೂ ಅಲ್ಲ; ನನ್ನ ತಾಯಿ ಲಕ್ಷ್ಮೀದೇವಿ. ನನ್ನ ನಿನ್ನ ಜನ್ಮಾಂತರದ ಕತೆಗಳು ಮುಗಿದಂತಾಯಿತು. ಉಳಿದುದನ್ನು ಈ ದೇವಿಯನ್ನು ಕೇಳಬೇಕು– ಎಂದು ಸುಮ್ಮನಾಯಿತು.

—

# ೧೨. ಪ್ರೇಮಿಗಳ ಪುನರ್ಮಿಲನ

“ ಅರಸೇ, ನೀನು ಲೋಕಾನಂದಕರ ಚಂದ್ರ; ಈ ಗಿಳಿ ಮುನಿ ಕುಮಾರನಾದ ಪುಂಡರೀಕ. ನಾನು ಈತನ ತಾಯಿ ಲಕ್ಷ್ಮೀದೇವಿ. ನನ್ನ ಪತಿ ಶ್ವೇತುಮುನಿಯ ಅಪ್ಪಣೆಯಂತೆ ವೈಶಂಪಾಯನ ಗಿಳಿ ಯನ್ನು ನಿನ್ನ ಹತ್ತರ ತಂದಿರುವೆ. ನಿಮ್ಮ ಶಾಪವಿಮೋಚನೆಯ ಕಾಲ ಬಂದಿದೆ. ನಿಮ್ಮ ನಿಮ್ಮ ಪೂರ್ವ ಜನ್ಮವನ್ನು ನೆನೆಸಿಕೊಳ್ಳಿರಿ. ನಿಮ್ಮ ಪತ್ನಿಯರನ್ನು ಕೂಡಿಕೊಂಡು ಸುಖವಾಗಿ ಬಾಳಿರಿ ” ಎಂದು ಲಕ್ಷ್ಮೀದೇವಿ ಹರಸಿದಳು.

ಕೂಡಲೆ ಶೂದ್ರಕ ಅರಸು, ಗಿಳಿ ಇವರು ಗತಜೀವಿಗಳಾಗಿ ನೆಲಕ್ಕೆ ಒರಗಿ ಬಿಟ್ಟರು ! ಮರುಕ್ಷಣದಲ್ಲಿಯೇ, ಚಂದ್ರಾಪೀಡ ನಿದ್ದೆ ಎಚ್ಚತ್ತವನಂತೆ ಎದ್ದು ಕುಳಿತ ! ಪುಂಡರೀಕ ಆಕಾಶಮಾರ್ಗದಿಂದ ಇಳಿದು ಬಂದ ! ಇಬ್ಬರೂ ಪರಮಾನಂದದಿಂದ ಪ್ರೇಯಸಿಯರ ಪಾಣಿಗ್ರಹಣ ಮಾಡಿದರು.

ಚಂದ್ರಾಪೀಡ ಕಾದಂಬರೀ ಸಹಿತನಾಗಿ ತಾರಾಪೀಡ ವಿಲಾಸವತೀ ದೇವಿಯರ ಪಾದಗಳಿಗೆ ನಮಸ್ಕರಿಸಿದ. ಪುಂಡರೀಕ ಮಹಾಶ್ವೇತೆ ಯೊಡನೆ ಶುಕನಾಸ— ಮನೋರಮೆಯರಿಗೆ ವಂದಿಸಿದ; ಮತ್ತು ನಿಮ್ಮ ಪುತ್ರನಾದ ವೈಶಂಪಾಯನನ ಪೂರ್ವಜನ್ಮವೇ ನಾನು, ಎಂದು ವಿಜ್ಞಾಪಿಸಿದ.

ತಾಯ್ತಂದೆಗಳು ಪುತ್ರರನ್ನು ಸೊಸೆಯಂದಿರನ್ನೂ ಮನವಾರೆ ಹರಸಿದರು. ಇಷ್ಟರಲ್ಲಿ ಕೇಯೂರಕ ಈ ಪುನರ್ಜನ್ಮದ ಶುಭವಾರ್ತೆ ಯನ್ನು ಗಂಧರ್ವ ಲೋಕಕ್ಕೆ ಮುಟ್ಟಿಸಿದ್ದ. ಚಿತ್ರರಥ ಮತ್ತು ಹಂಸ ಗಂಧರ್ವ ರಾಜರು ಪತ್ನೀ ಸಮೇತರಾಗಿ ಉಜ್ಜಯಿನಿಗೆ ಆಗಮಿಸಿದರು; ಅಳಿಯಂದಿರನ್ನು ಮಗಳಂದಿರನ್ನು ನೋಡಿ ಪರಮಾನಂದ ಪಟ್ಟರು. ಆಮೇಲೆ ಅಳಿಯಂದಿರನ್ನು ಗಂಧರ್ವ ಲೋಕಕ್ಕೆ ಕರೆದೊಯ್ದು ತಮ್ಮ ತಮ್ಮ ರಾಜ್ಯಗಳ ಪಟ್ಟಾಭಿಷೇಕ ಸಮಾರಂಭಗಳನ್ನು ನೆರವೇರಿಸಿದರು.

ಒಂದು ದಿನ ಕಾದಂಬರಿ—ಪತ್ರಲೇಖೆಯ ಸಮಾಚಾರವೇ ತಿಳಿಯ ಲಿಲ್ಲವಲ್ಲ! ಎಂದು ವಿಷಾದವನ್ನು ವ್ಯಕ್ತಮಾಡಿದಳು. ಆಗ ಚಂದ್ರಾ ಪೀಡ— ಪ್ರಿಯೇ, ಪತ್ರಲೇಖೆ ನನ್ನ ಪ್ರಿಯ ಪತ್ನಿಯಾದ ರೋಹಿಣೀ ದೇವಿ. ನಾನು ಶಾಪದಿಂದ ಚಂದ್ರಾಪೀಡನಾಗಿ ಹುಟ್ಟಿದೆ. ನನ್ನ ಅಗಲಿಕೆಯನ್ನು ತಡೆಯಲಾರದೆ ಪತ್ರಲೇಖೆಯಾಗಿ ನನ್ನನ್ನು ಅನು ಸರಿಸಿದಳು. ಅವಳ ಸುಕುಮಾರ ದೇಹಕ್ಕೆ ಭೂಲೋಕದ ಕಷ್ಟ ತಡೆಯುವಂತೆ ಇರಲಿಲ್ಲ. ನಾನೇ ಅವಳನ್ನು ಚಂದ್ರಲೋಕಕ್ಕೆ ಕಳಿಸಿ ರುವೆ— ಎಂದ. ಪತ್ರಲೇಖೆಯ ಸದ್ಗುಣ ಸೌಂದರ್ಯಗಳನ್ನು ನೆನೆದು ಕಾದಂಬರಿ ತುಸು ಹೊತ್ತು ಮೌನವಾಗಿದ್ದಳು.

ಗಂಧರ್ವ ಲೋಕದಲ್ಲಿ ನವ ದಂಪತಿಗಳ ವಿಲಾಸ ವೈಭವಗಳಿಗೆ ಕ್ಷಣಕ್ಷಣಕ್ಕೆ ಉಕ್ಕು ಬರುತ್ತಿತ್ತು. ಅನುಭವಿಸಿದಷ್ಟು ಮತ್ತೆ ಮತ್ತೆ ಕೆರಳುತ್ತಿತ್ತು ಅವರ ಕಾಮ ಜೀವನ. ಚಂದ್ರಾಪೀಡ— ಪುಂಡರೀಕರ ಮತ್ತು ಮಹಾಶ್ವೇತೆ— ಕಾದಂಬರಿಯರ ಗೆಳೆತನ ಸದಾ ಸಂವರ್ಧಿಸು ತ್ತಲೇ ಇತ್ತು.

ಕೆಲವು ಕಾಲ ಕಳೆಯಿತು. ಚಂದ್ರಾಪೀಡ ಪುಂಡರೀಕರು ಪತ್ನಿ ಯರಿಂದ ಕೂಡಿ ಉಜ್ಜಯಿನಿಗೆ ಮರಳಿದರು; ತಂದೆಗಳಿಗೆ ರಾಜ್ಯಕಾರ್ಯ ದಿಂದ ವಿರಾಮ ಕೊಟ್ಟರು. ತಾವೇ ಆಳ್ವಿಕೆಯನ್ನು ವಹಿಸಿಕೊಂಡರು. ಈ ಪವಿತ್ರ ಜೀವಿಗಳ ಆಡಳಿತದಲ್ಲಿ ಪ್ರಜೆಗಳು ಪರಮಾನಂದದಲ್ಲಿ ಇದ್ದರೆಂಬುದನ್ನು ಬೇರೆ ಹೇಳಬೇಕೇ?

—